ಶ್ರೀ ಸ್ವಸ್ತಿಶ್ರೀ ೧೦೫ ಅತಿಬಲಗ್ರಂಥಮಾಲೆ

# ಅಂಜನಾ ಪವನಂಜಯ ಕಥೆ

ಪದ್ಯ ಗದ್ಯ ಸಹಿತ

— ★ —

ಪ್ರಕಾಶಕರು
ಸ್ವಸ್ತಿಶ್ರೀ ೧೦೫ ಅತಿಬಲಮಹಾರಾಜರು

— ★ —

ಮುದ್ರಕರು
ಜೈ ಹಿಂದ್ ಪ್ರೆಸ್, ಮೈಸೂರು
1955

[ ಬೆಲೆ 0 - 12 - 0

# ಮುನ್ನುಡಿ

ಅನಾದಿಕಾಲದಿಂದ ಜೀವಾತ್ಮನು ತನಗೆ ಸುಖವು ದೊರಯಬೇಕೆಂದು ಹಂಬಲದಿಂದ ಸಂಸಾರವೆಂಬ ಸಾಗರದಲ್ಲಿ ತೊಳಲಾಡುತ್ತಿದ್ದಾನೆ ಅವನು ಪೂರ್ವ ಜನ್ಮದಲ್ಲಿ ಮಾಡಿದ ಪಾಪ ಅಥವಾ ಪುಣ್ಯಕರ್ಮಗಳಿಗೆ ಅನುಸಾರವಾಗಿ ನಾರಕಗತಿ, ತಿರ್ಯಂಚಗತಿ, ಮನುಷ್ಯಗತಿ, ದೇವಗತಿಗಳೆಂಬ ಸುಳಿಗಳಲ್ಲಿ ಸಿಕ್ಕಿ ಜನನ ಮರಣರೂಪೀ ಸಂಸಾರದಲ್ಲಿ ಸಿಕ್ಕಿ ವಿಷಯಸುಖವೇ ಸುಖವೆಂದು ತಿಳಿಯುತ್ತಾನೆ ಆದರೆ ಅದು ನಿಜವಾದ ಸುಖವಲ್ಲಾ ಅದು ಸುಖಾಭಾಸವಾಗಿರುತ್ತವೆ ಇದು ಕ್ಷಣಭಂಗುರವಾದದ್ದು ಅವಿನಾಶಿಯಾದ ಮುಕ್ತಿ ಸುಖವು ನಿಜವಾದ ಸುಖವು ಈ ಜೀವನವನ್ನು ಸುಖಿಯಾಗಿ ಮಾಡುವುದೇ ಧರ್ಮವು ಎಂದು ಹೇಳಲಾಗಿದ್ದರೂ ಕೂಡಾ ಕೆಲವರು ಭೋಗದಿಂದ ಸುಖ ಇದ ಎಂದು ತಿಳಿಯುತ್ತಾರೆ ಆದರೆ ಭೋಗದಿಂದ ಮುಕ್ತಿಯು ಸಾಧ್ಯವಾಗಲಾರದು ಎಂದು ಖಂಡಿತವಾಗಿ ಹೇಳಬಹುದು ಆದರ ಭೋಗೋಪಭೋಗಗಳನ್ನು ತ್ಯಜಿಸುವದರಿಂದಲೇ ಜೀವನವನ್ನು ವಿಕಾಸಗೊಳಿಸಲು ಸಾಧ್ಯವಿದೆ ಆದ್ದರಿಂದ ಮನುಷ್ಯನು ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಗ್ರಹ, ಪ್ರಮಾಣ ಈ ಪ್ರಕಾರ ಅಣುವ್ರತ ಧಾರಣ ಮಾಡಿಕೊಂಡರೆ ಅದು ಕ್ರಮೇಣ ಮಹಾವ್ರತಕ್ಕೆ ಮುಟ್ಟಿ ಸರ್ವಪರಿಗ್ರಹ ತ್ಯಾಗಮಾಡಿ ಅಂಟಿಕೊಂಡಿರುವ ಎಂಟು ಕರ್ಮಗಳನ್ನು ಗೆದ್ದು ಮುಕ್ತಿಯನ್ನು ಪಡೆಯಬಹುದು

ಜಿನಧರ್ಮದಲ್ಲಿ ನಿರೂಪಿಸಿದ ತತ್ವಗಳನ್ನು ಬೋಧಿಸಿ ನಿಜಾತ್ಮನಲ್ಲಿ ಸ್ವಭಾವಿಕವಾಗಿ ಅಡಗಿಕೊಂಡಿರುವ ಉಜ್ವಲ ಗುಣಗಳ ವಿಕಾಸವನ್ನು ಮಾಡುವ ಉದ್ದೇಶದಿಂದ ಪೂರ್ವಾಚಾರ್ಯರು ಅನೇಕ ಪುಣ್ಯಪುರುಷರ ಕಥೆಗಳನ್ನು ಬರದಿಟ್ಟಿರುವರು ಅವುಗಳ ಪೈಕಿ ಅಂಜನಾ ಪವನಂಜಯ ಕಥೆಯನ್ನು ಎಲ್ಲರೂ ಓದಿಕೊಂಡು ಸ್ತ್ರೀಪುರುಷರೆಲ್ಲರೂ ಮುಖ್ಯವಾಗಿ ದಯಾ, ದಾಕ್ಷಿಣ್ಯ, ಶೀಲ, ಸದ್ಗುಣ, ಕ್ಷಮಾ, ವಿನಯ, ವಾತ್ಸಲ್ಯ ಈ ಯಾವತ್ತೂ ಗುಣಗಳಿಂದ ಶೋಭಾಯಮಾನವಾಗಿರುವ ಸ್ತ್ರೀಪುರುಷರೇ ಧನ್ಯರು ಆದ್ದರಿಂದ ವಾಚಕರೆ, ಈ ಅಂಜನಾದೇವಿಯು ಸ್ತ್ರೀಯರಿಗಂತೂ ಆದರ್ಶಕವಾಗಿರುತ್ತದೆ ಇದು ಸ್ವಸ್ತಿಶ್ರೀ ೧೦೫ ಅತಿಬಲ ಗ್ರಂಥಮಾಲೆಯ ೩೩ನೇ ಪುಷ್ಪವಾಗಿರುತ್ತದೆ

ತಾ|| ೨೭-೧-೧೯೫೫ ಸ್ವಸ್ತಿಶ್ರೀ ೧೦೫ **ಅತಿಬಲಮಹಾರಾಜರು.**

ಮಾಘ ಶುದ್ಧ ೪



ಸ್ವಸ್ತಿಶ್ರೀ ೧೦೮ ಆಚಾರ್ಯ ಪಾಯಸಾಗರಮಹಾರಾಜರು

# ಅಂಜನಾ ಪವನಂಜಯರ ಕಥೆ



ರಾಗ—ನಾಟಿ

ಶ್ರೀಮದ್ಗೀರ್ವಾಣನಾಥವ್ರಜ ಫಣಿಸಂದೋಹ ಸಚ್ಚಕ್ರವರ್ತಿ- ।
ಸ್ತೋಮ ಪ್ರಸ್ತೂಯಮಾನಂ ವಿಮಲಗುಣಾಲಂಕೃತಂ ಭವ್ಯಲೋಕಂ ॥
ಸ್ವಾಮಿ ತ್ರೈಲೋಕ್ಯವಂದ್ಯಂ ಕುಮುದಪತಿ ಮಿಥ್ಯಾಂಧ ನೀಲಾಂಗ
ಶೋಭಂ ।
ಕಾಮಾರಿ ಪ್ರಾಪ್ತಬೋಧಂ ಕೊಡುಗೆಮಗೆ ನಿಜಾನಂದಮಂ
ಶ್ರೀ ವೃಷಭನಾಥಂ ॥

## ದೇವರ ಸ್ತೋತ್ರ

ರಾಗ—ಮೋಹನ, ಅಟತಾಳ (ಶ್ರೀರಮಣೀಮಾಕರ ಎಂಬಂತೆ)

ಪುರುಪರಮೇಶ ನಿನ್ನ। ಚರಣವ ಭಜಿಸುವೆ। ಕರುಣದಿ ಯೆನ್ನನು
ಪೊರೆವುದು ನಿರುತವು ॥ ಪ ॥
ಸುರನರ ಪೂಜ್ಯನೇ। ದುರಿತ ವಿದೂರನೇ। ಸ್ಮರಮದ ಭಂಗನೇ। ಮರುದೇವಿ
ಪುತ್ರನೇ ॥ ೧ ॥
ದೇವರ ದೇವನೇ। ಕೇವಲ ಬೋಧನೇ। ಪಾವನಮೂರ್ತಿಯೇ। ಕೈವಲ್ಯ
ದಾಯಕನೇ ॥ ೨ ॥
ಧರೆಯೊಳು ಶೋಭಿಸಿ। ಮೆರೆಯುವ ಸಾಲಿಗ್ರಾಮ। ಪುರದೊಳು ನೆಲಸಿಹ
ವರವೃಷಭೇಶ್ವರ ॥ ೩ ॥

## ಶಾರದೆಯ ಸ್ತೋತ್ರ

ಚೂರ್ಣಿಕೆ ಪದ್ಯ : ರಾಗ—ಕೇತಾರಗೌಳ

ಜಯ ವೀಣಾ ಮಣಿಮಾಲೆ ಪುಸ್ತಕ ಭಯೇ ಜಯ ಪಾಣಿ ಹಸ್ತದ್ವಯೇ।
ಜಯ ಶಾಸ್ತ್ರಾಗಮ ಮೂಲಕರ್ತೃ। ಹೃದಯೇ ಜಯ ಪೂರ್ಣ
ಚಂದ್ರೋದಯೆ ।

ಜಯ ಸ್ಯಾದ್ವಾದಸುತಾವಲಂಬಿತಪದಯೇ ಜಯ ಹಂಸಗಾನ್ಯ
ಪ್ರಿಯೇ ।
ಜಯ ಶ್ರೀ ಪಂಡಿತಾರ್ಯವರ್ಯ ಸಪದಯೇ। ಮಾಂ ರಕ್ಷ ಭಕ್ತಪ್ರಿಯೇ ॥

ರಾಗ–ಶಂಕರಾಭರಣ

ವಾಣೀ ಕರ್ಮಕೃಪಾಣೀ ಮ್ರೋಣೀ ಸಂಸಾರಜಲಧಿಸಂತರಣೀ ।
ವೇಣೀ ಜಿತಘನಮಾಲಾ ಜಿನವದನಾಂಭೋಜಭಾಸುರಾ ಜೀಯಾತ್ ।

ಮಾತು.—ಅರಹಂತನ ಮುಖದಿಂದ ಹುಟ್ಟಿದ ಶಬ್ದಗಳಿಗೆ ವಾಣಿ ಅಥವಾ ಸರಸ್ವತಿಯೆಂದು ಹೆಸರು ಶಾರದೆಯನ್ನು ಸ್ತೋತ್ರ ಮಾಡಿ ಸಭಾ ವರ್ಣನೆ.

ರಾಗ—ಕಾಂಭೋಧಿ

ಕವಿ ಗಮಕಿ ವಾದಿ ವಾಗ್ಮಿಪ್ರವರ ಮಹಾಗಾನ ನಿಪುಣರಿಂದೀ ಸಭೆಯುಂ ।
ವಿವಿಧ ಕಲಾಕೋವಿದರಿಂ। ತವೆ ರಾಜಿಪುದೀಗಳದರಿಂ ನಾನೇಂ ಧನ್ಯಂ ॥

ಮಾತು —ಇಂಥಾ ಸಭೆಯವರಲ್ಲಿ ಕಥಾ ಪೀಠಿಕೆಯನ್ನು ಹೇಳಲು ಉಪಕ್ರಮಿಸಿದ್ದೇನೆ ಇದರಲ್ಲಿ ಯಾವ ದೋಷಗಳಿದ್ದಾಗ್ಯೂ ಹಂಸಕ್ಷೀರ ನ್ಯಾಯದಂತೆ ನನ್ನ ಮೇಲೆ ಕೃಪೆಯಿಡಬೇಕಾಗಿ ಪ್ರಾರ್ಥನೆ

ಮೊದಲು ನಾವು ದೇವರನ್ನು ತ್ರಿಕರಣಶುದ್ಧಿಯಿಂದ ಭಜಿಸಬೇಕು ಅರಹಂತ ನಾಮವನ್ನು ಉಚ್ಚರಿಸುವುದರಿಂದ ಪಾಪಸಮೂಹವು ನಾಶವಾಗುತ್ತದೆ ಆದ್ದರಿಂದ ಅರಹಂತನನ್ನು ನಿತ್ಯವೂ ಭಜಿಸು.

ರಾಗ—ಮೋಹನ, ಅಷ್ಟತಾಳ

ಅರಹಂತನನ್ನು ಸ್ಮರಿಸೋ। ಹೇ ಮನುಜ। ಅರಹಂತನನ್ನು ಸ್ಮರಿಸೋ॥ಪ॥
ನಿರುತವು ಅರಹಂತನನ್ನು ನೀ ಸ್ಮರಿಸಲು। ದುರಿತಗಳೆಲ್ಲವ। ಪರಿಹರಿಪುದು
ಕೇಳೋ ॥ಅ। ಪ ॥
ವೀತರಾಗನೆ ದೇವ। ಭೂತಹಿತವೇ ಧರ್ಮ। ಜಾತರೂಪನೆ ಗುರುಯೆಂದು
ನೀ ತಿಳಿದು ।
ಪ್ರೀತಿಯ ಭಾವದಿ ನೆನೆದರೆ ಮುಕ್ತಿಯ। ರೀತಿಯನರಿದು ಪಡೆಯಲೋ
ಮನುಜ ॥೧॥

ಆಶ ಪಾಶ ಮೋಹ ಮದ ಮಾತ್ಸರ್ಯವು। ಕ್ಲೇಶರಾಗಭಯರುಜೆ ಮೊದ
ಲಾದ। ದೋಷ ಪದಿನೆಂಟನೂ।
ನಾಶವ ಮಾಡಿ ನೀ ಈಶನ ಮಾರ್ಗವ ಹಿಡಿಯುರೋ ಮನುಜ ॥ ೨ ॥

ಮಾತು,—ಹೇ ಜೀವನೇ ನೀನು ಮೋಕ್ಷವನ್ನು ಪಡೆಯಬೇಕಾದರೆ ಸಪ್ತ ವ್ಯಸನಗಳನ್ನು ದೂರಮಾಡಬೇಕು ಸಪ್ತವ್ಯಸನಗಳಾವುವು ಅಂದರೆ. ಕೊಲೆ, ಹುಸಿ, ಕಳವು, ಪರದಾರ, ಅತಿಕಾಂಕ್ಷೆ, ಜೂಜು ಬೇಟ ಇವುಗಳನ್ನು ದೂರಮಾಡಿ ಹದಿನೆಂಟು ದೋಷಗಳನ್ನು ನಾಶಮಾಡಿದ ದೋಷಗಳಾವುವು ಯೆಂದರ —ಹಸಿವು, ಬಾಯಾರಿಕೆ, ಭಯ, ವೈರ, ಪ್ರೀತಿ, ಮೋಹ, ಮದ, ಚಿಂತೆ, ಮ ಪ್ಪು, ರೋಗ, ಮರಣ, ಜವರು, ಖೇದ, ಅಹಂಕಾರ,ರತಿ,ವಿಸ್ಮಯ, ಜನನ, ನಿದ್ರೆ, ಬೇನರು ಇವುಗಳನ್ನು ಜಯಿಸಿದವರಿಗೆ ದೇವರೆಂದು ಹೇಳು ತ್ತಾರೆ

ಸಮ್ಯಗ್ದರ್ಶನವೆಂದರೆ ಜೀವಅಜೀವಾದಿ ತತ್ವಗಳಲ್ಲಿ ಪ್ರೀತಿಯು ಹುಟ್ಟುವುದು ಆ ತತ್ವಾರ್ಥಗಳನ್ನು ಪ್ರೀತಿಸಿ ಭೇದಗಳನ್ನು ತಿಳಿಯುವುದೇ ಸಮ್ಯಗ್ಜ್ಞಾನವು ಈ ಜ್ಞಾನದಿಂದ ಪ್ರಾಣಿಗಳನ್ನು ಕಾಪಾಡಿ ವರ್ತಿಸು ವುದು ಸಮ್ಯಕ್ಚಾರಿತ್ರವು ಈ ರತ್ನತ್ರಯವು ಮುಕ್ತಿಗೆ ಕಾರಣವು ಇವುಗಳಿಂದ ಸರ್ವಕರ್ಮಕ್ಷಯವನ್ನು ಮಾಡಿದರೆ ಮೋಕ್ಷವು ದೊರೆಯು ತ್ತದೆ ಮೋಕ್ಷವು ಅಥವಾ ಕೈವಲ್ಯವು ಜೀವನಿಗೆ ಲೋಕಾಗ್ರದಲ್ಲಿ ಸ್ಥಿರವಾದ ಸ್ಥಾನ ವಾಗಿದೆ. ಅಂಥಾ ಮುಕ್ತಿಯನ್ನು ಆತ್ಮನು ಪಡೆಯದೆ ಹೋದರೆ ಮನುಷ್ಯ ಗತಿ, ದೇವಗತಿ, ತಿರ್ಯಂಚಗತಿ ಮತ್ತು ನರಕಗತಿ ಈ ನಾಲ್ಕು ಗತಿಗಳಲ್ಲಿಯೂ ತನ್ನ ಪಾಪ ಪುಣ್ಯಾನುಸಾರವಾಗಿ ಹುಟ್ಟಿ ತೊಳಲುತ್ತಾ ಬಳಲುತ್ತಾ ಸಾಯುತ್ತಾ ಇರಬೇಕು

ರಾಗ—ಕಾಂಬೋಧಿ

ತೊವಲ ಪೊದಕೆ ಗೂಡಂ ಪಂಜರಂ ಅಸ್ಥಿ ಪುಂಜಂ ತವೆಯದೆ ಕ್ರಿಮಿ
ಪೂರ್ಣಂ ಪೂತಿಗಂಧಂ ತು ನಿತ್ಯಂ ॥
ಭವದುರಿತ ಸಮೇತಂ ಸರ್ವದುಃಖಾನಿ ಮೂಲಂ ।
ಇದನರಿದೆಲೆ ಜೀವ ದೇಹದೊಳು ಪ್ರೀತಿ ಬೇಡ ॥ ೧ ॥

ಮಾತು — ಆತ್ಮನು ಭವಾಂತರಗಳಿಂದ ಪಡೆದ ಪಾಪಕರ್ಮದ ದೆಶೆ ಯಿಂದ ಸರ್ವ ದುಃಖಕ್ಕೂ ಕಾರಣವಾದ ಮೂಳೆ, ರಕ್ತ, ಮಾಂಸಗಳಿಂದ ಕೂಡಿ ಕೊಳಚಿನ ಹೊದಿಕೆಯನ್ನು ಹೊಂದಿ ಕ್ರಿಮಿ ಮತ್ತು ದುರ್ಗಂಧಯುಕ್ತ ವಾದ ದೇಹವನ್ನು ಪಡೆದು ತೊಳಲುತ್ತಿದ್ದಾನೆ ಆದ್ದರಿಂದ ಹೇ ಜೀವನೇ ಇಂಥಾ ಹೇಯವಾದ ದೇಹದ ಮೇಲೆ ಪ್ರೀತಿಯಿಡಬೇಡವೆಂದು ಆಪ್ತರ ವಚನ.

ರಾಗ—ಶಂಕರಾಭರಣ

ವರರಾಜ್ಯಂ ಸುರಚಾಪ ಬಂಧುಜನಮುಂ ಸಂಧ್ಯಾರುಣಂ ಮತ್ತ
ವಾರಣಮುಂ ।
ವಾಜಿ ರಥಂ ಪದಾತಿನಿವಹಂ ಸ್ತ್ರೀಯರ್ಕಳುಂ ಪುತ್ರರುಂ ।
ಘನಮೇಘಾಕೃತಿ ರೂಪು ಯೌವನಬಲಂ ವಿದ್ಯುಚ್ಚಲಂ ನೋಳ್ಪೊಡಂ।
ನಿರುತಂ ನಂಬಲು ಬೇಡ ಜೀವ ನಿನಗಂ ಸದ್ಧರ್ಮವೊಂದೇ ಧ್ರುವಂ॥

ಮಾತು —ಶ್ರೇಷ್ಠವಾದ ರಾಜ್ಯವೂ ಬಂಧು ಜನಗಳೂ, ಮಿತ್ರರೂ, ಆನೆ, ಕುದುರೆ, ರಥ,ಸೈನ್ಯ, ಸೇವಕರು, ಪರಿವಾರ, ಹೆಂಡತಿ, ಮಕ್ಕಳು, ಮನೆ, ಸಂಪತ್ತು ರೂಪ, ಯೌವನ, ಬಲ, ಇವುಗಳ್ಯಾವುವನ್ನೂ ನಂಬಬೇಡ. ಎಲೇ ಜೀವನೆ ನಿನಗೆ ಸದ್ಧರ್ಮವೊಂದೇ ಸ್ಥಿರವಾದುದು.

ವೃತ್ತ : ರಾಗ—ಕಾಂಬೋದಿ

ಸುರಲೋಕಂಗಳ ಪೊಕ್ಕಡಂ ಯಿರದೆ ತಾಂ ಪಾತಾಳಮಂ ಪೊಕ್ಕಡಂ
ಗಿರಿದುರ್ಗಂಗಳ ಪೊಕ್ಕಡಂ ।
ಶರಧಿಯಂ ಪಾಯ್ದಲ್ಲಿ ಪೊಕ್ಕಿರ್ದೊಡಂ ಭರದಿಂ ಪರ್ವತದಗ್ರದಲ್ಲಿ
ಗುಹೆಯಂ ಪೊಕ್ಕಿರ್ದೊಡಂತೆಲ್ಲಿಯುಂ ।
ಶರಣೆಲ್ಲಂ ಪೆರತಾದ ಸಾವು ನಿನಗಂ ಸದ್ಧರ್ಮ ದುರ್ಗಂ ವಿನಾ ॥

ಮಾತು :—ಎಲೈ ಜೀವನೇ ಸ್ವರ್ಗಲೋಕದಲ್ಲಿ ಅಡಗಿಕೊಂಡಿದ್ದಾಗ್ಯೂ, ಪಾತಾಳ ಲೋಕದಲ್ಲಿ ಅಡಗಿದ್ದಾಗ್ಯೂ, ಬೆಟ್ಟ ದುರ್ಗಗಳಲ್ಲಿ ಮರೆ ಮಾಡಿಕೊಂಡಿದ್ದಾಗ್ಯೂ, ಸಮುದ್ರದ ತಳದಲ್ಲಿ ಹೊಕ್ಕಿಕೊಂಡಿದ್ದಾಗ್ಯೂ, ಬೇಗ ಹೋಗಿ ಪರ್ವತದ ಶಿಖರದಲ್ಲಿದ್ದಾಗ್ಯೂ ನಿನಗೆ ಎಲ್ಲಿಯೂ ಆಶ್ರಯ ಸಿಕ್ಕುವುದಿಲ್ಲ. ಅಂದರೆ—ಸಾವು ನೋವು, ದುಃಖ, ರೋಗ ಕಷ್ಟಗಳನ್ನು ಅನುಭವಿಸಲೇಬೇಕು. ತಪ್ಪಿದ್ದಲ್ಲ, ಆದ್ದರಿಂದ ಸದ್ಧರ್ಮವೆಂಬ ಮಾರ್ಗವನ್ನು ಹಿಡಿ.

ರಾಗ–ಭೈರವಿ

ಓರ್ವನೆ ಸ್ವರ್ಗದಲ್ಲಿ ಸುರದೇವಿ ಮನೋಹರ ರೂಪನಾಗಿಯುಂ ।
ಓರ್ವನೆ ಕರ್ಮದಿಂದ ನರಕ ತಿರ್ಯಂಚ ದುಃಖವನೆಯ್ದುವಲ್ಲಿಯುಂ ।
ಓರ್ವನೆ ನರನಾಗಿ ಸಾವು ಪುಟ್ಟು ವೆಡೆಯೊಳ್ ಬಲು ಬಂಧನದಲ್ಲಿ
ತೊಳಲ್ವುಡಂ ।
ಓರ್ವನೆ ಸರ್ವಕರ್ಮಕ್ಷಯವನೆಯ್ದಿಸಿ ಮೋಕ್ಷನನೈದುವಲ್ಲಿಯುಂ ॥

ಮಾತು —ಹೇ ಜೀವನೆ ಸ್ವರ್ಗದಲ್ಲಿ ದೇವಸ್ತ್ರೀಯರಿಗೆ ಮನೋಹರನಾದ ಪತಿಯಾಗುವವನೂ ನೀನೊಬ್ಬನೆ ಪಾಪಕರ್ಮವಶದಿಂದ ನರಕ ತಿರಿಯಂಚಗತಿಗಳಲ್ಲಿ ಹುಟ್ಟಿ ದುಃಖದಿಂದ ನರಳುತ್ತಾ ಕಷ್ಟಗಳನ್ನು ಅನುಭವಿಸುವವನೂ ಕೊನೆಗೆ ಸಾಯುವವನೂ ನೀನೊಬ್ಬನೇ ಸರ್ವ ಕರ್ಮಕ್ಷಯಮಾಡಿ ಮೋಕ್ಷವನ್ನು ಪಡೆಯುವವನೂ ನೀನೊಬ್ಬನೇ ಪತ್ನೀಪುತ್ರಾದಿಗಳು, ಸಹೋದರರು, ಮಿತ್ರರು, ಬಂಧುಗಳು, ಸೇವಕರು ಮೊದಲಾದವರು ನಿನ್ನ ಸಂಗಡ ಯಾರೂ ಒರುವುದಿಲ್ಲ ನಿನ್ನ ಕಷ್ಟಸುಖಗಳನ್ನು ಯಾರೂ ತೆಗೆದುಕೊಳ್ಳಲಾರರು ನೀನೊಬ್ಬನೇ ಅನುಭವಿಸಬೇಕು ಯೆಂಬ ಆಪ್ತರ ವಚನವನ್ನು ನಂಬಿ ಮುಕ್ತಿಯ ಮಾರ್ಗವನ್ನು ಹಿಡಿ.

ರಾಗ—ಭೈರವಿ, ರೂಪಕತಾಳ

ದೊರೆಯಲಾರದೋ। ಮುಕುತಿ ದೊರೆಯಲಾರದೋ ॥ ಪ ॥
ದೊರೆಯಲಾರದಯ್ಯ ಮುಕುತಿ ।
ಅರುಹನನ್ನು ಸ್ಮರಿಸದಲೇ। ದುರಿತಗಳನು ಎಸಗುತಿರುವ ಪರಮಪಾತಕಿ
ಯೊದ ನರಗೆ ।ಅ। ಪ ।
ಸಪ್ತವ್ಯಸನದೊಳಗೆ ಮುಳುಗಿ। ಆಪ್ತರನ್ನು ನಂಬದಲೇ। ಪ್ರಾಪ್ತವಾದ
ಮನುಷ್ಯಗತಿಯ। ವ್ಯರ್ಥವಾಗಿ ನೀಗುವವಗೆ ॥ ೧ ॥
ನರಕತಿರ್ಯಂಚ ಗತಿಯೋಳ್। ತಿರುಗಿ ತಿರುಗಿ ನರಳಿ ಹೊರಳಿ। ಹರಣ
ಫಳಿದು ಮರಳಿ ಜನಿಸಿ।ಚಲಿಸುತಿರುವ ಜೀವಿಗಳಿಗೆ ದೊರೆಲಾರದೋ।॥೨॥

ಮಾತು —ಎಲೈ ಜೀವನೇ ಪಾಪಗಳಿಗೆಡೆಯಾದ ಸಪ್ತವ್ಯಸನಗಳಲ್ಲಿ ಮುಳುಗಿ ಆಪ್ತರು ಹೇಳಿರುವ ವಚನವನ್ನು ನಂಬದೆ, ತನಗೆ ಪ್ರಾಪ್ತವಾಗಿರುವ ಮನುಷ್ಯ ಜನ್ಮವನ್ನು ಸಾರ್ಥಕಪಡಿಸಿಕೊಳ್ಳದೆ ವ್ಯರ್ಥವಾಗಿ ನೀಗುವವನಿಗೆ

ಮುಕ್ತಿಯು ದೊರೆಯಲಾರದು. ಆದ್ದರಿಂದ ಸನ್ಮಾರ್ಗ ಪ್ರವರ್ತಕನಾಗಿ ಭಗವಂತನನ್ನು ಸ್ಮರಿಸು. ದೇವರು ಯಾರುಯೆಂದರೆ .—

ರಾಗ—ಕೇತಾರಗೌಳ

ಯೋ ವಿಶ್ವಂ ವೇದವೇದ್ಯಂ ಜನನಜಲನಿಧೇರ್ಭಂಗಿನ ಪಾರದೃಶ್ವಾ ।
ಪೌರ್ವಾಪರ್ಯಾವಿರುದ್ಧಂ ವಚನಮನುಪಂ ನಿಷ್ಕಲಂಕಂ ಯ ದೀಯಂ ।
ತಂ ವಂದೇ ಸಾಧುವಂದ್ಯಂ ಸಕಲಗುಣನಿಧಿಂ ಧ್ವಸ್ತದೋಷದ್ವಿಷಂ ತಂ ।
ಬುದ್ಧಂ ವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂ ವಾ ।

ಮಾತು —ಯಾವನು ಲೋಕಾಲೋಕವನ್ನೆಲ್ಲಾ ಏಕಕಾಲದಲ್ಲಿ ಚೆನ್ನಾಗಿ ತಿಳಿದಿದ್ದಾನೋ, ಯಾವನು ಅನಂತ ತರಂಗಗಳುಳ್ಳ ಜನ್ಮವೆಂಬ ಸಮುದ್ರವನ್ನು ದಾಟಿದ್ದಾನೋ, ಯಾವನ ಮಾತುಗಳು ಪೂರ್ವಾಪರ ಸಂಗತಿಗಳಿಗೆ ವಿರೋಧಬಾರದಂತೆ ಇವೆಯೊ, ಅಂಥಾವನೇ ನಿಷ್ಕಳಂಕನು ಯಾವನಿಂದ ದೋಷವೆಂಬ ವೈರಿಯು ನಾಶಮಾಡಲ್ಪಟ್ಟು ಸಮಸ್ತ ಸದ್ಗುಣ ಗಳು ಸಂಗ್ರಹಿಸಲ್ಪಟ್ಟು ಇವೆಯೋ, ಯಾವನು ಸಾಧುಜನಗಳಿಗೆ ವಂದ್ಯನಾಗಿ ದ್ದಾನೆಯೋ ಆತನು ಬುದ್ಧನಾಗಿರಲಿ, ವರ್ಧಮಾನನಾಗಿರಲಿ, ಬ್ರಹ್ಮ ವಿಷ್ಣು, ಶಿವ ಮುಂತಾದವರೇ ಆಗಲಿ ಅಂಥಾ ದೇವನನ್ನು ವಂದಿಸಲು ಅರ್ಹತೆ ಅಂಥಾವನೇ ದೇವರೆಂದು ಆಚಾರ್ಯರು ವ್ಯಕ್ತಪಡಿಸಿದ್ದಾರೆ

ಶ್ಲೋಕ

ಅನಂತಸುಖಸಂಪನ್ನಂ । ಜ್ಞಾನಾಮೃತಪಯೋಧರಂ ।
ಅನಂತವೀರ್ಯಸಂಪನ್ನಂ। ದರ್ಶನಂ ಪರಮಾತ್ಮನಃ ।

ಮಾತು —ಪರಮಾತ್ಮನ ದರ್ಶನ ಗುಣವು ಅನಂತಸುಖಯುಕ್ತವೂ, ಜ್ಞಾನವೆಂಬ ಅಮೃತಕ್ಕೆ ಮೇಘದಂತೆಯಿರುವುದೂ, ಅನಂತ ಶಕ್ತಿಯುತವೂ ಆಗಿದೆ ಆದ್ದರಿಂದ ಅಂಥಾ ದೇವರನ್ನು ಸ್ತುತಿಸು

## ಭಗವಂತನ ಸ್ತೋತ್ರ

ರಾಗ—ಆನಂದ ಭೈರವಿ

ಜಯ ದುರಿತಹರಣ ನಿರುಪಮ ಜಯ ಶಾಶ್ವತಸೌಖ್ಯದಾಯಿ
ನಿತ್ಯಾನಂದ ।

ಜಯ ಮದನಮದವಿಭಂಜನ ಜಯ ಜಯ ಸರ್ವಜ್ಞ ಮೋಕ್ಷ
ಲಕ್ಷ್ಮೀನಾಥ |

ರಾಗ—ಅರಭಿ

ಭಾಮಿನೀಷಟ್ಪದಿ

ಮಾರ ಮದ ಸಂಹಾರ ಕರುಣಾಕರ, ಗುಣಮಣಿ ಹಾರ ಭುವನಾಧಾರ |
ಧವಳ ಶರೀರ ಧರ್ಮಾಗಾರ ಸಾಕ್ಕಾರ, ಘೋರ ಭವ ಭಯ ದೂರ
ಕರುಣಾ |
ಕಾರ ನುತಮಂದಾರ ವಿಗತವಿಕಾರ ಸಾರಾಸಾರ ಕರುಣಿಸೆನ್ನನು ನೀಂ|
ಹೇ ಜೀವನೇ

ಶ್ಲೋಕ

ದುರ್ಲಭಂ ನರಜನ್ಮತ್ವಂ ವಿವೇಕಮತಿದುರ್ಲಭಂ |
ದುರ್ಲಭಂ ಜಿನಧರ್ಮತ್ವಂ ಜ್ಞಾನಂ ತ್ರೈಲೋಕ್ಯದುರ್ಲಭಂ |

ಮಾತು —ಎಂಭತ್ತು ನಾಲ್ಕುಲಕ್ಷ ಯೋನಿಗಳಲ್ಲಿ ತೊಳಲುತ್ತಾ ಕದಾಚಿತ್ ಮನುಷ್ಯ ಜನ್ಮವನ್ನು ಪಡೆಯುವುದು ದುರ್ಲಭವು ಅಂತಹ ಜನ್ಮವನ್ನು ಪಡೆದು ಯುಕ್ತಾಯುಕ್ತವನ್ನು ತಿಳಿಯದೆ, ಜ್ಞಾನಶೂನ್ಯನಾಗಿ, ಪಶುಗಳ ಹಾಗೆ ವರ್ತಿಸದೆ ವಿವೇಕವಂತನಾಗಿ ಸುವರ್ಣವನ್ನು ಪರೀಕ್ಷಮಾಡುವ ರೀತಿ ದೇವ, ಗುರು, ಶಾಸ್ತ್ರವನ್ನು ನಂಬಿ ನಡೆಯುವ ವಿವೇಕವು ಪರಮ ದುರ್ಲಭವು. ಆದ್ದರಿಂದ ಜೀವನೇ ಸುಜ್ಞಾನವಂತನಾಗಿ ಧರ್ಮಾಧರ್ಮಗಳನ್ನು ತಿಳಿದು ಸದ್ಧರ್ಮದಲ್ಲಿ ನಿರತನಾಗಿ, ಕರ್ಮಗಳನ್ನು ನಾಶಮಾಡಿ ಭವ ಸಾಗರವನ್ನು ದಾಟಿ ನಿತ್ಯಸುಖವಾದ ಮೋಕ್ಷವನ್ನು ಸಂಪಾದಿಸುವುದನ್ನು ಇನ್ನು ತಡಮಾಡಬೇಡ ಈ ದೇಹವು ಅಸ್ಥಿರವಾದದ್ದು ಈಗಲೇ ಮೋಕ್ಷವನ್ನು ಪಡೆಯಲಿಕ್ಕೆ ಸಿದ್ಧನಾಗು

ರಾಗ—ಧನ್ಯಾಸಿ

ಸಾಧಿಸಬೇಕಯ್ಯ ಮೋಕ್ಷವ, ಸಾಧಿಸಬೇಕಯ್ಯ || ಪ || ಸಾಧಿಸಬೇಕು
ಮೋಕ್ಷವನೀಗಲೆ | ಪ |
ಸಾಧುಜನಂಗಳ ಸಂಗವ ಮಾಡೀ, ಶೋಧಿಸಿ ಚಿತ್ತವ ಭೇದಿಸಿ ತತ್ವವ
ಹಾದಿಯ ತಿಳಿದರೆ ಐದುವೆ ಮುಕ್ತಿಯ |

ಧರ್ಮವ ಹಿಡಿಯಬೇಕು, ಅದರ ಮರ್ಮವ ತಿಳಿಯಬೇಕು, ಮರ್ಮವ
ತಿಳಿದು ಹೆಮ್ಮೆಯತೊರೆದು ।
ಕರ್ಮಗಳೆಲ್ಲವ ನಿರ್ಮಲಮಾಡೀ ನಿರ್ಮಲನಾದ ಚಿನ್ಮಯರೂಪನ ಒಮ್ಮನ
ದಿಂದಲಿ ಧ್ಯಾನಿಸಿ ಮುಕ್ತಿಯ ॥

ಮಾತು —ಆದ್ದರಿಂದ ಜೀವನೇ ಮೋಕ್ಷವನ್ನು ಪಡೆಯಲಿಕ್ಕೆ ಬೇಗ ಸಿದ್ಧನಾಗು. ತದ್ಭವದಲ್ಲಿಯೇ ಮೋಕ್ಷವನ್ನು ಪಡೆದ ಆಂಜನೇಯನಾದ ಆ ಮಹಾಪುಣ್ಯಪುರುಷನ ಜನನವನ್ನು ಈ ಸಭೆಯಲ್ಲಿ ಹೇಳಲು ಉಪಕ್ರಮಿಸುವೆನು.

ಜಯಘೋಷ

ಜಯ ತೀರ್ಥಂಕರ ಜಯ ತೀರ್ಥಂಕರ ಜಯ ತೀರ್ಥಂಕರ ದೇವನಮೋ।
ದೇವನಮೋ ಜಯ ದೇವ ನಮೋ ಜಯ ದೇವ ನಮೋ ಜಯ
ದೇವನಮೋ ।
ವೀರನ ಸಮುಖದಿ ಗೌತಮಮುನಿವರ, ಶ್ರೇಣಿಕ ಭೂಪಗೆ ಪೇಳಿದನು ।
ಮಾರುತಿಯಂಜನೆಯುದರದಿ ಜನಿಸಿದ, ಕಾರಣಪುರಷನ
ಚರಿತೆಯನು ॥

ಮಾತು :—ಭಗವಾನ್ ಮಹಾವೀರ ವರ್ಧಮಾನ ತೀರ್ಥಂಕರರ ಸಮವಸರಣದಲ್ಲಿ ಗಣಧರರಾದ ಗೌತಮಮುನಿಶ್ರೇಷ್ಠರು ಮಗಧದೇಶದ ರಾಜಗೃಹ ಪಟ್ಟಣಕ್ಕೆ ಅಧಿಪತಿಯಾದ ಶ್ರೇಣಿಕ ಮಹಾರಾಜನಿಗೆ ಆ ಮಹಾಪುಣ್ಯಪುರುಷನಾದ ಅಂಜನಾದೇವಿಯ ಪುತ್ರನಾದ ಆಂಜನೇಯನು ಜನ್ಮಿಸಿದ ವಿವರವನ್ನು ಹೇಳುವರು

ಧರೆಯೊಳು ವಿಜಯಾರ್ಧ ಪರ್ವತಶ್ರೇಣಿಯೊಳ್ ಮೆರೆವ ಮಹೇಂದ್ರಾಖ್ಯ
ನಗರಿಯನು ।
ಪರಿಪಾಲಿಪನರಸುಮಹೇಂದ್ರ ತನ ಅರಸಿಯೊಳ್ ಸುಖದಿಂದಿರುತಿರಲು।

ಮಾತು —ಧರೆಯೊಳಗೆ ಅತಿ ಶ್ರೇಷ್ಠವಾದ ವಿಜಯಾರ್ಧ ಪರ್ವತ ಶ್ರೇಣಿಯಲ್ಲಿ ಅತಿ ಶೋಭಾಯಮಾನವಾಗಿ ಪ್ರಕಾಶಿಸುವ ಮಹೇಂದ್ರವೆಂಬ ಪಟ್ಟಣವನ್ನು ಮಾಹೇಂದ್ರನೆಂಬ ರಾಜನು ಧರ್ಮದಿಂದ ಪರಿಪಾಲನೆ ಮಾಡುತ್ತಾ ತನ್ನ ಅರಸಿಯಾದ ಸೌಂದರ್ಯ ರೂಪುಲಾವಣ್ಯಯುಕ್ತಳಾದ

ಮನೋವೇಗೆ ಎಂಬ ತನ್ನ ಸತ್ನಿಯೊಡನೆ ಸುಖದಿಂದ ಇರುತ್ತಿರುವಲ್ಲಿ

ಪತಿವ್ರತೆಯೆನಿಸಿದ ಮನೋವೇಗೆಯು ದುರದಿ|ಶತಕುಮಾರರು ಜನಿಸಿರಲು||
ಸತತವು ಅವರನು ಹಿತವೊಳು ಸಲಹುತ| ಅತಿ ಸಂತಸದಿಂದಿರುತಿರಲು |೧||

ಪತಿವ್ರತೆಯಾದ ಆ ಮನೋವೇಗೆಯಲ್ಲಿ ನೂರು ಮಂದಿ ಗಂಡುಮಕ್ಕಳು ಜನಿಸಿರಲು ಅವರನ್ನು ಬಹು ಪ್ರೀತಿಯಿಂದ ಸಲಹುತ್ತಾ ರಾಣಿಯು ಸುಖದಿಂದ ಕಾಲವನ್ನು ಕಳೆಯುತ್ತಿರುವಾಗ ಒಂದಾನೊಂದು ದಿವಸ

ಸತಿಯು ಮನೋವೇಗೆ ನೆರೆಹೊರೆ ಜನಗಳ| ಸುತೆಯರ ನೋಡುತೆ ಮನ
ಮೊಳಗೆ| ವ್ಯಥೆಯಿಂದಲಿ ತಾಂ ಕುವರಿಯಪಡೆವೆನೆಂ| ದತಿಶಯ ಚಿಂತೆಯೊ
ಳಿರತಿರಲು ||

ರಾಣಿಯಾದ ಮನೋವೇಗೆಯು ನನಗೆ ನೂರು ಮಂದಿ ಗಂಡು ಮಕ್ಕಳಿದ್ದರೂ ನನಗೆ ಒಬ್ಬ ಹೆಣ್ಣು ಮಗಳೂ ಕೂಡ ಜನಿಸಲಿಲ್ಲ ನೆರೆಮನೆಯವರ ಹೆಣ್ಣು ಮಕ್ಕಳನ್ನು ನೋಡಿ ನನಗೆ ತುಂಬಾ ವ್ಯಥೆಗೆ ಕಾರಣವಾಗಿದೆ ಒಬ್ಬ ಹೆಣ್ಣು ಮಗಳನ್ನಾದರೂ ಪಡೆಯುವ ಪುಣ್ಯ ನನಗಿದೆಯೇ ನಾನು ಬದುಕಿರುವುದು ಸಾರ್ಥಕವಿಲ್ಲವೆಂದು ದುಃಖಿಸುತ್ತಾ ಚಿಂತೆಯಿಂದಿರುವ ಸಮಯದಲ್ಲಿ ಮಾಹೇಂದ್ರ ರಾಜನು ತನ್ನ ಒಡ್ಡೋಲಗವ ಮುಗಿಸಿಕೊಂಡು ಅಂತಃಪುರಕ್ಕೆ ಬಂದು ದುಃಖಿಸುತ್ತಿರುವ ರಾಣಿಯನ್ನು ನೋಡಿ ನಿನ್ನ ಈ ವ್ಯಸನಕ್ಕೆ ಕಾರಣವೇನೆಂದು ಕೇಳಲು ಆಗ ಮನೋವೇಗೆಯು ಪತಿಯನ್ನು ಕುರಿತು

ರಾಗ—ಶಹನ—ಅಟತಾಳ

ಪತಿಯೆ ಲಾಲಿಸು ಎನ್ನ | ವ್ಯಥೆಯನ್ನು ಸಹಿಸೆನು | ಕ್ಷಿತಿಯೊಳೆಂತು ಬಾಳ್ವೆ|
ಹತಭಾಗ್ಯಳಾದೆನೆ ||೧|| ಸುತರು ನೂರ್ವರೂ ಇಹರು| ಹಿತವನ್ನು ಈಯುವ
ಸುತೆಯೋರ್ವಳುದಿಸಲು| ಅತಿಶಯಮಪ್ಪುದು || ೨ || ನಂದನೆಯಿಲ್ಲದೆ |
ಮಂದಿರವು ನಮಗೆ| ಆನಂದವಾಗದೆ ಮನ| ಕುಂದಿ ಚಿಂತೆಯ ನಾಂತೆ ||೩||

ಪ್ರಾಣಕಾಂತನೇ ನಮಗೆ ನೂರು ಮಂದಿ ಗಂಡು ಮಕ್ಕಳಿದ್ದಾಗ್ಯೂ ಒಬ್ಬ ಹೆಣ್ಣು ಮಗಳಾದರೂ ಇಲ್ಲದಿದ್ದರೆ ಶೋಭಾಯಮಾನವಾಗಲಾರದು ನೆರೆಹೊರೆಯವರ ಹೆಣ್ಣು ಮಕ್ಕಳನ್ನು ನೋಡಿ ನನಗೆ ತುಂಬಾ ವ್ಯಾಕುಲವುಂಟಾಗಿದೆ ಸತಿಯರಿಗೆ ಒಬ್ಬ ಸುತೆಯಾದರೂ ಇದ್ದರೆ ಅವರ ಪ್ರೀತಿ ಮತ್ತು ಸಂಭ್ರಮಗಳು ಅತಿಶಯವಾಗಿರುತ್ತವೆ ಆದ್ದರಿಂದ ಪುತ್ರಿಯನ್ನು ಪಡೆಯುವ

ಭಾಗ್ಯವು ನಮಗೆ ಲಭಿಸಲಿಲ್ಲವಲ್ಲಯೆಂಬ ಚಿಂತೆಯು ಒದಗಿದೆ ಎಂದು ಹೇಳಲು ಆದಕ್ಕೆ ಮಾಹೇಂದ್ರನು

ಕಂದ—ರಾಗ—ಭೈರವಿ

ಚಿಂತಿಸದಿರು ನೀಂ ತರುಣಿಯೆ|ಸಂತಸದಿಂದಿರು ಶಾಂತ ಚಿತ್ತದಿಂದ ನವರತಂ||
ಕಂತು ಹರ ಶ್ರೀ ಶಾಂತಿನಾಥನ| ಸ್ವಂತ ಭಕ್ತಿಯಿಂ ಸ್ತುತಿಸು ನಿನ್ನಭೀಷ್ಟ ಸಿದ್ಧಿ ಸುಗುಂ ||

ಕಾಂತಿಮಣಿ ಈ ಚಿಂತೆಯನ್ನು ಬಿಟ್ಟು ಸಮಾಧಾನಚಿತ್ತಳಾಗಿ ಯಾವಾಗಲೂ ಶ್ರೀ ಶಾಂತೀಶ್ವರನನ್ನು ಅತಿ ಭಕ್ತಿಯಿಂದ ಸ್ತುತಿಸುವುದರಿಂದ ನಿನ್ನ ಕೋರಿಕೆಯು ಸಿದ್ಧಿಸುವುದು ಆದ್ದರಿಂದ ಸಂತೋಷದಿಂದಿರು. ಎಂದು ಸಮಾಧಾನ ಮಾಡಿ ಕೆಲವು ದಿವಸಗಳು ಕಳೆದನಂತರ ಮನೋವೇಗೆಯು

ಮನೋವೇಗೆ ಗರ್ಭವ ಧರಿಸಲು ದಿನದಿನ| ಮನದೊಳು ಬಯಕೆಯು ಅಂಕುರಿಸಿ|| ತನು ಶೋಭಿಸಿ ಮುಖ ಬಿಳುಪೇರಲು ತಾಂ| ಘನಸಂತಸದೊಳಿರುತಿರಲು || ೧ ||

ಮನೋವೇಗೆಗೆ ಗರ್ಭವಂಕುರಿಸಿ ಶರೀರ ಮುಖ ಸಹ ಬಿಳುಪಾಗಿ ಬಯಕೆಯು ಸಹ ಹುಟ್ಟಿರಲು ಅತಿ ಸಂತೋಷದಿಂದ ಕಾಲವನ್ನು ಕಳೆಯುತ್ತಿರಲು

ನವಮಾಸವು ಕಳೆಯಲು ಮನೋವೇಗೆ| ಕುವರಿಯ ಪೆತ್ತಳು ಶುಭದಿನದಿ||
ಸುವಿಲಾಸದಿಂದಲಿ ದೊರೆಯು ಮಾಹೇಂದ್ರನು | ಜವದೊಳು ಕರೆಸಿದ ವೈದಿಕರ || ೧ ||

ಮನೋವೇಗೆಯು ನವಮಾಸಗಳು ಕಳೆದ ನಂತರ ಒಂದು ಹೆಣ್ಣು ಮಗುವನ್ನು ಪ್ರಸವಿಸಲು ಈ ವರ್ತಮಾನವನ್ನು ದೊರೆಯಾದ ಮಾಹೇಂದ್ರನು ಕೇಳಿ ಸಂತೋಷಚಿತ್ತನಾಗಿ ತನ್ನ ಪಟ್ಟಣವನ್ನು ಶೃಂಗರಿಸಿ ತನ್ನ ಅರಮನೆಯನ್ನು ತಳಿರುತೋರಣಗಳಿಂದ ಶೃಂಗರಿಸಿ ತನ್ನ ಇಷ್ಟ ಮಿತ್ರ ಬಂಧುಗಳನ್ನು ಕರೆಯಿಸಿ ಹತ್ತು ದಿನಗಳು ಕಳೆದ ನಂತರ ಶುಭ ದಿನದಲ್ಲಿ ವೈದಿಕರನ್ನು ಕರೆಯಿಸಿ ನಾಮಕರಣ ಮಹೋತ್ಸವವನ್ನು ನೆರವೇರಿಸಿ ಅಂಜನಾದೇವಿಯೆಂದು ಹೆಸರನ್ನಿಡಿಸಿದ ನಂತರ ಮುತ್ತೈದೆಯರೆಲ್ಲ ಮಗುವನ್ನು ತೊಟ್ಟಿಲಲ್ಲಿರಿಸಿ ಜೋಗುಳ ಶಾಸ್ತ್ರ ಮಾಡುತ್ತಾರೆ.

ಹಾಡು–ರಾಗ–(ಜೋಗುಳ ಹಾಡು)

ಜೋ ಜೋ ಜೋ ಜೋ ಕನಕಪುತ್ಥಳಿಯೇ। ಜೋ ಜೋ ಜೋ ಜೋ
ಮಣಿ ಸದ್ಗುಣಿಯು। ಜೋ ಜೋ ಜೋ ಜೋ ಮನಸಿಜ ರೂಪೆಯೇ।
ಜೋ ಜೋ ಜೋ ಜೋ ಮಾಣಿಕ್ಯ ಪ್ರಭೆಯೇ ॥ ೧ ॥ ಜೋ ಜೋ ಜೋ
ಜೋ ಮೂಜಗ ಮೋಹನೇ। ಜೋ ಜೋ ಜೋ ಜೋ ರಾಜಿನ ಮಣಿಯೇ।
ಜೋ ಜೋ ಜೋ ಜೋ ಸೋಜಿಗ ಶಿಶುವೇ। ಜೋ ಜೋ ಜೋ ಜೋ
ತೇಜೋ ವಿರಾಜೇ ॥ ೨ ॥ ಜೋ ಜೋ ಜೋ ಜೋ ಕಂಜದಳಾಕ್ಷಿಯೇ।
ಜೋ ಜೋ ಜೋ ಜೋ ಮಂಜುಳ ವೇಣಿಯೇ। ಜೋ ಜೋ ಜೋ ಜೋ
ರಂಜಿತ ತನುವೇ। ಜೋ ಜೋ ಜೋ ಜೋ ಅಂಜನಾದೇವಿಯೇ ॥ ೩ ॥

ಹೀಗೆ ಮುತ್ತೈದೆಯರೆಲ್ಲರೂ ಜೋಗುಳ ಪಾಡಿದ ನಂತರ ಅವರಿಗೆ ಫಲ ತಾಂಬೂಲಗಳನ್ನು ವಿನಿಯೋಗ ಮಾಡಿದ ನಂತರ ಸರ್ವರಿಗೂ ಸಂತರ್ಪಣೆ ಮಾಡಿಸಿ ತೃಪ್ತಿಪಡಿಸಿ ಬಂದ ವೈದಿಕರಿಗೆ ಭೂರಿ ದಾನದಕ್ಷಿಣೆಗಳನ್ನು ಕೊಟ್ಟು ಸನ್ಮಾನಿಸಿ ಬಂಧುಗಳನ್ನು ಸಹ ಸತ್ಕರಿಸಿದ್ದಾನೆ ಅನಂತರ ಮನೋವೇಗೆಯು ಪ್ರೀತಿಯಿಂದ ಕುವರಿಯನ್ನು ಸಲಹುತ್ತಾ ನಿತ್ಯವೂ ಅಂಜನೆಗೆ ದಿವ್ಯ ವಸ್ತ್ರಾಭರಣಗಳಿಂದ ಅಲಂಕಾರ ಮಾಡುತ್ತಾ ಬಾಲಲೀಲೆಗಳನ್ನು ನೋಡಿ ಆನಂದ ಪಡುತ್ತಾ ಕಾಲವನ್ನು ಕಳೆಯುತ್ತಿದ್ದಳು ಹೀಗೆ ಕೆಲವು ವರ್ಷಗಳು ಕಳೆದ ನಂತರ ಮಗಳಿಗೆ ವಿದ್ಯಾಭ್ಯಾಸ ಮಾಡಿಸಲು ಸಕಲ ಶಾಸ್ತ್ರಗಳನ್ನು ಓದಿ ನಿಪುಣೆಯಾಗಿ ಕೆಲವು ವರ್ಷಗಳು ಕಳೆದ ನಂತರ ಪ್ರಾಪ್ತವಯಸ್ಕಳಾಗಲು ತಂದೆಯಾದ ಮಾಹೇಂದ್ರನು ತನ್ನ ಮಗಳನ್ನು ನೋಡಿ ಸಂತೋಷಪಟ್ಟು ತನ್ನ ಆಸ್ಥಾನಕ್ಕೆ ಬಂದು ಮಂತ್ರಿಗಳನ್ನು ಕುರಿತು

ಕುವರಿಗೆ ಯೌವನದೋರಲು ಅರಸನು। ವಿವಾಹವ ಮಾಡಲು ಬೇಕೆಂದು॥
ಭೂಮಿಯೊಳಗತಿಶಯ ವರಗಳಿಹ ಪರಿ। ತವಕದಿ ಕೇಳಿದ ಸಚಿವರರ ॥೧॥

ಅಯ್ಯಾ ಮಂತ್ರಿ ಶ್ರೇಷ್ಠರೆ ನನ್ನ ಕುವರಿಯಾದ ಅಂಜನಾದೇವಿಗೆ ವಿವಾಹಕ್ಕೆ ಪ್ರಾಪ್ತ ವಯಸ್ಸು ಒದಗಿರುವುದರಿಂದ ಅವಳಿಗೆ ತಕ್ಕ ವರನ್ಯಾರು ಈ ಲೋಕದಲ್ಲಿ ಯಾವ ರಾಜಪುತ್ರನಿರುವನು ತಿಳಿಸಿಯೆನ್ನಲು ಆಗ ಸುಮತಿಯೆಂಬ ಮಂತ್ರಿಯು ದೊರೆಯನ್ನು ಕುರಿತು

ಅರಸನೆ ನಿನ್ನಯ ತನುಜೆಗೆ ಸ್ವಯಂವರ। ವಿರಚಿನೆ ಸರಿಬಹ ವರಗಳನು
ವರಿಸಲು ಅನುವಾಗುವುದದರಿಂದಲೇ। ತ್ವರಿತದಿ ಕಾರ್ಯವನೆಸಗುವುದು॥

ಮಹಾರಾಜನೇ ಕ್ಷತ್ರಿಯರ ಪದ್ಧತಿಯಂತೆ ಸ್ವಯಂವರವನ್ನೇರ್ಪಡಿಸಿ ರಾಜಾಧಿರಾಜರುಗಳನ್ನು ಕರೆಯಿಸಿ ಸ್ವಯಂವರವನ್ನು ನಡೆಸಿದರೆ ಆಗ ತಕ್ಕ ವರನು ದೊರಕುವನು ಅದೇ ಉಪಾಯವೆಂದನು. ಆಗ ಅಮರಸಾಗರನೆಂಬ ಮಂತ್ರಿಯು ದೊರೆಯನ್ನು ಕುರಿತು

ಸ್ವಯಂವರ ವಿರಚಿನೆ ಕಲಹವು ಬರುವುದು। ಕುವಲಯದೊಳಗಿದು ಅನು
ಚಿತವೂ। ಭುವಿಯೊಳಗತಿಶಯ ವರನನು ಆರಿಸೆ। ವಿವಾಹವ ಮಾಳ್ಪುದು
ಉಚಿತವು ಕೇಳ್॥

ರಾಜೇಂದ್ರನೇ ಸ್ವಯಂವರವನ್ನು ಏರ್ಪಡಿಸುವುದರಿಂದ ಕಲಹಗಳಿಗೆ ಆಸ್ಪದವುಂಟಾಗುತ್ತೆ. ಪೂರ್ವದಲ್ಲಿ ಸುಲೋಚನಾ ಸ್ವಯಂವರದಲ್ಲಿ ಭರತ ಚಕ್ರವರ್ತಿ ಕುಮಾರನಾದ ಅರ್ಕಕೀರ್ತಿಗೆ ಅವಮಾನವಾಗಿ ಕಲಹವುಂಟಾಗಿ ತುಂಬಾ ಅನಾಹುತಕ್ಕೆ ಕಾರಣವಾದ ಸಂಗತಿಯನ್ನು ನೀವು ಕೇಳಿರಬಹುದು ಆದ್ದರಿಂದ ಸ್ವಯಂವರವು ಸರಿಯಾದದ್ದಲ್ಲವೆಂದು ಹೇಳಲು ಮೂರನೇ ಸುಬುದ್ಧಿಯೆಂಬ ಮಂತ್ರಿಯು ದೊರೆಯನ್ನು ಕುರಿತು

ಕನಕಪುರದ ದೊರೆ ಹಿರಣ್ಯವರ್ಮನ। ತನುಜನು ವಿದ್ಯುತ್ ಪ್ರಭನೆಂಬವಗೆ।
ತನುಜೆಯನಿತ್ತು ವಿವಾಹವನೆಸಗಲು ಸನುಮತವಹುದು ಅವರಿಂದ॥

ರಾಜೇಂದ್ರನೇ ಕೇಳು ಕನಕಪುರದ ದೊರೆಯಾದ ಹಿರಣ್ಯವರ್ಮ ಸುಮನಾದೇವಿಯವರ ಪುತ್ರ ವಿದ್ಯುತ್‌ಪ್ರಭನೆಂಬವನಿಗೆ ತಮ್ಮ ಪುತ್ರಿಯನ್ನು ಕೊಟ್ಟು ವಿವಾಹ ಮಾಡುವುದೇ ನನಗೆ ಸಮ್ಮತವು ಎಂದು ಸುಬುದ್ಧಿ ಮಂತ್ರಿಯು ಹೇಳಲು ಆಗ ನಾಲ್ಕನೇ ಸಂದೇಹಪಾರಗನೆಂಬ ಮಂತ್ರಿಯು ಎದ್ದುನಿಂತು ಕೈಮುಗಿದು ದೊರೆಯನ್ನು ಕುರಿತು ಮಹಾರಾಜನೇ ಆ ವಿದ್ಯುತ್‌ಪ್ರಭನು ಹದಿನೆಂಟನೇ ವರ್ಷದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ತಪಸ್ವಿಯಾಗುವನೆಂಬ ಉದ್ದೇಶವಿರುವುದು ಈ ವರನಿಂದ ಯಾವ ಅನುಕೂಲತೆಯೂ ಇರುವುದಿಲ್ಲ ಆದುದರಿಂದ,

ಕಂದ—ರಾಗ—ಭೈರವಿ

ಆದಿತ್ಯಪುರಪತಿ ಪ್ರ। ಹ್ಲಾದನ ಸತಿ ಕೇತುಮತಿಯ ಸುತ ಪವನಂಜಯಗೇ।

ಆದರದಿ ಸರಿಣಯ ಮಾಳ್ಪುದು। ಮೇದಿನೀಸತಿಯಾಲಿಸೀಗಕೆನ್ನ ವಚನ
ವನೂ ॥

ದೊರೆಯೇ ಆದಿತ್ಯಪುರದ ದೊರೆಯಾದ ಪ್ರಹ್ಲಾದರಾಜ ಕೇತುಮತಿಯವರ ಕುಮಾರ ಪವನಂಜಯನಿಗೆ ನಿಮ್ಮ ಪುತ್ರಿಯನ್ನು ಕೊಟ್ಟು ವಿವಾಹ ಮಾಡುವುದೇ ಶ್ರೇಷ್ಠವು ಮತ್ತು ಅನುಕೂಲವು ಎಂದು ಸಂದೇಹಪಾರಗ ಮಂತ್ರಿಯು ಹೇಳಲು ಅದಕ್ಕಾಮಹೇಂದ್ರನು ಬಹಳ ಸಂತೋಷಪಟ್ಟು ಎಲೈ ಸಚಿವಶಿರೋಮಣಿಯೇ ನೀನು ಹೇಳುವುದೇ ಯುಕ್ತವು ಅದರಂತೆಯೇ ನಡೆಸೋಣ ಆದರೆ ಈಗ ನಂದೀಶ್ವರ ಅಷ್ಟಾಹ್ನಿಕಕಾಲವು ಪ್ರಾಪ್ತವಾಗಿದೆ. ಮೊದಲು ಅರ್ಹತ್ಪರಮೇಶ್ವರರ ಪೂಜೆಗೋಸ್ಕರ ಅಂತಃಪುರದವರಾದಿಯಾಗಿ ವಿಶಿಷ್ಟ ಪರಿವಾರದೊಡನೆ ಕೈಲಾಸಪರ್ವತಕ್ಕೆ ಹೋಗೋಣ ಈ ಸಂಗತಿಯನ್ನು ಎಲ್ಲರಿಗೂ ತಿಳಿಸುವುದಲ್ಲದೆ ಪ್ರಯಾಣಕ್ಕೆ ವಿಮಾನಗಳನ್ನು ಸಿದ್ಧಪಡಿಸು ಎಂದು ಹೇಳಲು ಮಂತ್ರಿಯೂ ಅದರಂತೆ ಎಲ್ಲರಿಗೂ ತಿಳಿಸಿ ಪ್ರಯಾಣ ಬೆಳಸಿ ವಿಮಾನಾರೂಢರಾಗಿ ದೊರೆ ಮತ್ತು ರಾಣೀವಾಸಾದಿ ಅಂತಃಪುರದ ಸ್ತ್ರೀಯರೂ ಮಂತ್ರಿಗಳೂ ಮುಂತಾದ ಪರಿವಾರದೊಂದಿಗೆ ಕೈಲಾಸ ಪರ್ವತಕ್ಕೆ ಬಂದು ಇಳಿದಿದ್ದಾರೆ ಆಗ ದೊರೆಯು ಮಂತ್ರಿಯನ್ನು ಕುರಿತು ಎಲೈ ಮಂತ್ರಿಯೇ ಇದು ಯಾವ ಪರ್ವತ ? ಇದರಲ್ಲಿ ಅತಿಶಯವೇನು. ಹೇಳು ಎಂದು ಕೇಳಲು ಮಹಾರಾಜನೇ ಇದೇ ಕೈಲಾಸ ಪರ್ವತವು ಇದಕ್ಕೆ ರಜತಗಿರಿಯೆಂತಲೂ ಹೆಸರಿದೆ,

ರಜತಗಿರಿಯೊಳಗೆ ಪುರು ಪರಮೇಶನು। ತ್ರಿಜಗವಂದಿತನಾಗಿ ಮುಕ್ತಿಯನು।
ವಿಜಯ ಪಡೆದನದರಿಂದನು ದಿನ। ಸುಜನರು ಬಕುತಿಯಿಂದೆರಗುವರು ||

ಇದೇ ವೃಷಭತೀರ್ಥಂಕರರ ಮುಕ್ತಿಸ್ಥಾನವು ಪ್ರಥಮ ಚಕ್ರವರ್ತಿಯಾದ ಭರತರಾಜನು ಶ್ರೀಪುರುಪರಮೇಶ್ವರನು ಮುಕ್ತನಾದಮೇಲೆ ತೀರ್ಥಂಕರರ ಪ್ರತಿಮೆಯನ್ನು ದುಃಸ್ವಪ್ನದೋಷ ಶಮನಾರ್ಥನಾಗಿ ನವರತ್ನಗಳಿಂದ ನಿರ್ಮಿಸಿದನು ಈ ಬಿಂಬಗಳಿಗೆ ಅಪಾಯ ಬಾರದಂತೆ ಸಗರ ಚಕ್ರವರ್ತಿಯ ಅರವತ್ತು ಸಾವಿರ ಮಕ್ಕಳು ಈ ಪರ್ವತದ ಬುಡವನ್ನು ಕಡೆದು ಎಂಟು ಪದರುಗಳನ್ನು ಮಾಡಿದ್ದರಿಂದ ಇದಕ್ಕೆ ಅಷ್ಟಾಪದಗಿರಿಯೆಂದು ಅನ್ವರ್ಥನಾಮವೂ ಸಹ ಇದೆ. ಈಗ ಪಾಲ್ಗುಣ ಶುದ್ಧ ಅಷ್ಟಮಿಾ ಆರಭ್ಯ ಪೂರ್ಣಿಮಾ ವರೆಗೂ ಈ ಬಿಂಬಗಳನ್ನು ಅರ್ಚಿಸಿ ಸ್ತುತಿಮಾಡಲು ಅನುಕೂಲವಾದ ಕಾಲವಾಗಿದೆ ಆದ್ದ

ರಿಂದ ನಾವುಗಳು ಪರಮೇಶ್ವರನನ್ನು ಸ್ತೋತ್ರ ಮಾಡೋಣ ಎನ್ನಲು ದೊರೆಯು ಸಂತೋಷಪಟ್ಟು

ರಾಗ–ಖರಹರಪ್ರಿಯ, ರೂಪಕತಾಳ

ಮರುದೇವಿ ನಾಭಿರಾಜ ಸುತಂ। ಸಾರ ಸೌಖ್ಯಮಂ ||ಪಲ್ಲ|| ವರಭವ್ಯದೇಹಿಗಳ್ಗೆ ಮಾಳ್ಕೆ। ಧೀರಧೀಯುತಂ ||ಅ। ಪಲ್ಲ|| ಸಾಕೇತ ಭೂಷಾತ್ಮಜಂ। ಲೋಕರಕ್ಷಕಂ। ನಾಕಾದಿನಾಥ ಪೂಜಿತಂ| ಶ್ರೀಕರ ಪ್ರದಂ||೧||ನತ ಸುರಾಸುರೇಂದ್ರಮೌಲಿ|ತತಿ ಸುಕೀಲಿತ|ರತುನದೀಪ್ತಿ ರಾಜಿವಾರಿ|ಧೌತಪಾದನುಂ ||೨||ಧರೆಯ ಕೈಲಾಸಗಿರಿಸುಸಂಸ್ಥ ಪುರುಜಿನಾದಿಪಂ। ಸ್ಮರಮದರರ ಮೇರು ಧೀರ। ನಿರಘನಂ ವಿಭುಂ || ೩ ||

ರಾಗ

ಆದಿನಾಥನೆ ಮೇದಿನೀಶನೆ। ಪಾದಪಂಕಜಕೊಂದಿಪೆ|| ಕಾದುರಕ್ಷಿಸೊ ಲೋಕವಂದ್ಯನೆ ಪೌದನಾಪುರಾಧೀಶನೇ ||ಪಲ್ಲ|| ಯಾರು ಕಾಣದ ಊರ ಸೇರಿದೆ| ಆರ್ಯವಿನುತ ಪದಾಬ್ಜನೇ। ಸಾರಿ ಬೇಡುವೆ ಕೋರಿದಿಷ್ಟವ। ತೋರು ವೀರ ಜಿನೇಶನೇ ||೧|| ಮೂರು ಲೋಕದ ತುತ್ತ ತುದಿಯೊಳು ನೇರಿ ನೆಲಸಿಹ ಸೌಖ್ಯದೊಳು । ಬಾರಿ ಬಾರಿಗು ಧ್ಯಾನ ಮಾಳ್ಪೆನು ಧೀರ ಕರುಣಿಸಿ ಕಾಯೊ ನೀಂ ||೨||

ಹೀಗೆ ರಾಜನು ಮುಂತಾದವರೆಲ್ಲರೂ ದೇವರನ್ನು ಸ್ತೋತ್ರ ಮಾಡಿ ನಮಸ್ಕರಿಸಿ ಚಂದ್ರಕಾಂತಾಶಿಲೆಯದಲ್ಲಿ ಕುಳಿತಿರುವ ವೇಳೆಯಲ್ಲಿ ರಾಜನು ಮಂತ್ರಿಯನ್ನು ಕುರಿತು ಎಲೈ ಮಂತ್ರಿಯೇ ತನ್ನ ಪರಿವಾರದೊಂದಿಗೆ ವೈಭವದಿಂದ ಬರುತ್ತಿರುವವನು ಯಾರು ಎಂದು ಕೇಳಲು ಅದಕ್ಕಾಮಂತ್ರಿಯು ರಾಜೇಂದ್ರನೇ ಈತನೇ ನಾನು ಮೊದಲು ಅರಿಕೆಮಾಡಿದ ರವಿಪುರಾಧಿಪತಿಯಾದ ಪ್ರಹ್ಲಾದಕೇಚರೇಂದ್ರನು ಎಂದು ಹೇಳಲು ಆಗ ದೊರೆಯು ಸಂತೋಷಪಟ್ಟು ಆ ಪ್ರಹ್ಲಾದರಾಜನನ್ನು ತನ್ನ ಹತ್ತಿರದಲ್ಲಿ ಕೂಡಿಸಿಕೊಂಡು ಕುಶಲಪ್ರಶ್ನೆಯನ್ನು ಕೇಳಲು ಆಗ ಪ್ರಹ್ಲಾದರಾಜನು ತಮ್ಮ ಕುಶಲವಾರ್ತೆಯನ್ನು ಹೇಳಿ ಮಹೇಂದ್ರರಾಜನೇ ನಿಮ್ಮುಗಳಿಗೆ ಕುಶಲವೇ ನಿನಗೆ ಪುತ್ರರೆಷ್ಟು ಮಂದಿಯಿರುವರು ಎಂದು ಕೇಳಲು ಅದಕ್ಕಾಮಹೇಂದ್ರನು, ನೂರು

ಮುಂದಿ ಗಂಡು ಮಕ್ಕಳು ಕಿರಿಯವಳೊಬ್ಬಳು ಪುತ್ರಿಯಾದ ಅಂಜನಾದೇವಿ ಯನ್ನು ನಿನ್ನ ಪುತ್ರನಾದ ಪವನಂಜಯನಿಗೆ ವಿವಾಹ ಮಾಡಬೇಕೆಂದು ನನ್ನು ಮಂತ್ರಿಯು ನಿರ್ಧರಿಸಿರುವನು ಇದಕ್ಕೆ ನಿನ್ನ ಅಭಿಪ್ರಾಯವೇನು ಎನಲು ಆದಕ್ಕಾ ಪ್ರಹ್ಲಾದರಾಜನು

ಕಂದ–ರಾಗ–ಭೈರವಿ

ನಿನ್ನ ತನುಜೆ ಅಂಜನೆಯ। ಯೆನ್ನಯ ಕುವರ ಪವನಂಜಯಗೆ ನಲಿದಿತ್ತು॥
ಉನ್ನತ ಪರಿಣಯ ವೆಸಗುತೆ' ಸನ್ನುತ ನೀಯೆನ್ನ ಕುಲವನುದ್ಧರಿಸೈ
ಮುದದಿಂ ॥

ಮಾಹೇಂದ್ರರಾಜನೇ ನಿನ್ನ ಸುಕುಮಾರಿಯನ್ನು ನನ್ನ ಸುಕುಮಾರನಿಗೆ ಕೊಟ್ಟು ವಿವಾಹವನ್ನು ಅತಿ ಸಂತೋಷದಿಂದ ಶೀಘ್ರವಾಗಿ ಮಾಡಬೇಕೆಂಬುದೇ ನನ್ನ ಕೋರಿಕೆಯೆಂದು ಹೇಳಲು ಆಗ ಮಾಹೇಂದ್ರನು ಸಂತೋಷಪಟ್ಟು ಎಲ್ಲಾ ಬಂಧುಗಳು ನಿನ್ನ ಇಷ್ಟಮಿತ್ರಬಂಧುಗಳು ನನ್ನ ಇಷ್ಟಮಿತ್ರಬಂಧುಗಳು ಎಲ್ಲರೂ ಈ ಕೈಲಾಸಗಿರಿಯಲ್ಲಿಯೇ ಬಂದಿರುವುದರಿಂದ ಈ ಕೈಲಾಸಗಿರಿಯ ಲ್ಲಿಯೇ ಪಟ್ಟಣವನ್ನು ನಿರ್ಮಿಸಿ ಆಲಯಗಳನ್ನು ಅರಮನೆಗಳನ್ನು ರಚಿಸಿ ಇಲ್ಲಿಯೇ ವಿವಾಹ ಮಾಡೋಣವೆಂದು ಹೇಳೋಣ ಪ್ರಹ್ಲಾದರಾಜನು ಸಹ ಸಂತೋಷಪಟ್ಟು ಹಾಗೆಯೇ ಆಗಲಿ ಎನ್ನಲು ಆಗ ಮಾಹೇಂದ್ರರಾಜನು ಆ ಕೈಲಾಸಗಿರಿಯಲ್ಲಿ ತನ್ನ ವಿದ್ಯಾದೇವತೆಗಳ ಸಹಾಯದಿಂದ ಒಂದು ಪಟ್ಟಣ ವನ್ನು ಏರ್ಪಡಿಸಿ ಅದರಲ್ಲಿ ಅರಮನೆಗಳು, ಉಪ್ಪರಿಗೆಗಳುಳ್ಳ ಸೌಂಧರ್ಯಗಳಾದ ಆಲಯಗಳು, ಅಂಗಡಿಗಳು ಸಹ ನಿರ್ಮಿಸಿ ತನ್ನ ಬಂಧುಮಿತ್ರಪರಿವಾರಗಳಿ ಗೆಲ್ಲಾ ತಕ್ಕ ವಸತಿಗಳನ್ನು ಕಲ್ಪಿಸಿ ಪ್ರಹ್ಲಾದರಾಜನ ಕಡೆಯ ಬಂಧುಮಿತ್ರ ಪರಿವಾರದವರಿಗೆಲ್ಲಾ ಯೋಗ್ಯ ಗೃಹಗಳನ್ನು ನಿರ್ಮಿಸಿ ಪಟ್ಟಣವನ್ನು ಶೋಭಾ ಯಮಾನವಾಗಿ ಅಲಂಕರಿಸಿ ಜೋಯಿಸರನ್ನು ಕರೆಯಿಸಿ ಅವರಿಂದ ವಿವಾಹಕ್ಕೆ ಶುಭ ಲಗ್ನವನ್ನು ನಿಶ್ಚಯಿಸಿ ಆ ಜೋಯಿಸರಿಗೆ ಸನ್ಮಾನಿಸಿ ವಿವಾಹಕ್ಕೆ ತಕ್ಕ ಸಲಕರಣೆಗಳನ್ನು ಒದಗಿಸುತ್ತಿದ್ದಾನೆ. ಹೀಗಿರುವಲ್ಲಿ ಒಬ್ಬ ರಸಿಕನು ಪವನಂಜಯನ ಅರಮನೆಗೆ ಪ್ರವೇಶಮಾಡಿ ಅಂಜನಾದೇವಿಯ ರೂಪುಲಾವಣ್ಯ ಗುಣಾತಿಶಯಗಳನ್ನು ಆ ಪವನಂಜಯನ ಮುಂದೆ ಕೊಂಡಾಡಿ ಅವನಿಂದ

ಬಹುಮಾನ ಪಡೆದು ಹೊರಟುಹೋದನಂತರ ಪವನಂಜಯನು ಆ ಅಂಜನಾ ದೇವಿಯನ್ನು ನೋಡಬೇಕೆಂಬ ವ್ಯಾಮೋಹದಿಂದ ಮಿತ್ರನನ್ನು ಕುರಿತು,

ಕಂದ—ರಾಗ

ಬಾಲಕಿ ಅಂಜನೆ ಚರಿತಮು । ಪೇಳಲ್ ಲಲಿತದೊಳು ಕೇಳ್ದಮಾತ್ರದೊಳಂ
ಜನೆ ॥ ಲೋಲಾಕ್ಷಿ ಎನ್ನ ಮನಮಂ । ಖೇಲದೊಳೆಳದಿಹಳು ಲಲನೆ
ಮನಮೇಂ ಕರಿನಂ ॥

ಮಿತ್ರನೇ ಈ ವಿರಹಾವಸ್ಥೆಯನ್ನು ತಾಳಲಾರೆನು ಅಂಜನಾದೇವಿ ಯನ್ನು ನೋಡಬೇಕೆಂಬ ಕುತೂಹಲವುಂಟಾಗಿರುವುದಲ್ಲಾ, ಇದಕ್ಕೇನು ಮಾಡಲಿ, ಏನಾದರೊಂದು ಉಪಾಯವನ್ನು ಹೇಳು ಎಂಬುದಾಗಿ ತನ್ನ ಮಿತ್ರ ನಾದ ಪ್ರಹಸಿತನನ್ನು ಕೇಳಲು ಅದಕ್ಕಾ ಪ್ರಹಸಿತನು ಪವನಂಜಯನನ್ನು ಕುರಿತು ಮಿತ್ರನೇ ಈ ಚಿಂತೆಯನ್ನು ಬಿಡು. ನಾವು ನಮ್ಮ ರೂಪನ್ನು ವಿದ್ಯಾ ಬಲದಿಂದ ಮರೆಮಾಚಿಕೊಂಡು ಆ ಅಂಜನಾದೇವಿಯ ಅಂತಃಪುರದ ಬಳಿ ನಿಂತು ನೋಡೋಣ ನಡೆ ಎಂದು ಅದೃಶ್ಯರೂಪವನ್ನು ಹೊಂದಿ ಹೊರಟು ಬಂದು ಅಂಜನಾದೇವಿಯ ಅಂತಃಪುರದ ಗವಾಕ್ಷದ ಬಳಿ ನಿಂತು ನೋಡಿದ ಪವನಂಜಯನು ವ್ಯಾಮೋಹದಿಂದ ಅವಳ ರೂಪು ಲಾವಣ್ಯವನ್ನು ನೋಡಿ,

ಹಾಡು—ರಾಗ—ಕಾಂಬೋಧಿ—ರೂಪಕತಾಳ

ಎಂತು ಶೋಭಿಸುತಿಹಳು । ಈ ರಮಣೀ । ತರುಣೀ। ಸುಗುಣೀ ॥ ಪ ॥
ಇಂದು ಬಿಂಬದ ಪರಿ । ಸುಂದರ ಮುಖಸಿರಿ । ಕಂದರ್ಪ ಶರದಂತೆ ।
ಅಂದವ ಬೀರುತೆ ॥ ೧ ॥ ನಾರಿಯ ನೋಡಲು । ಮಾರನು ಕೊಲ್ಲುವ ।
ಶಾರದಚಂದ್ರಿಕೆ । ಶೂರೆ ಚೆಲ್ಲಿಹಳು ॥ ೨ ॥ ಮದಗಜ ಗಾಮಿನಿ । ಮದ
ನನ ಅರಗಿಣಿ । ವದನವ ನೋಡಲು । ಹೃದಯ ಕಾತರಿಪುದು ॥ ೩ ॥

ಕಂದ—ರಾಗ

ಕಿಸಲಯದೋಳ್ ತುಟಿಕೆಂಪಾಂ । ತೆಸೆವುದು ಸುಕುಮಾರ ವಿಟಪಿಗಳ
ತೆರ ತೋಳ್ಗಳ್ ॥ ಶಶಿವದನೆ ಅಂಗದೋಳ್ ಸಮು ॥ ದಿಶಿತೀ ಯೌವನವೆ
ಲೋಭನೀಯಂ ಸುಮದೋಳ್ ॥

ಪ್ರಹಸಿತನೇ ಈ ರಮಣೀಮಣಿಯ ಅಂಗಸೌಂದರ್ಯವು ಎಷ್ಟು ಶೋಭಾಯಮಾನವಾಗಿ ಮನಸ್ಸಿಗೆ ಆನಂದವನ್ನುಂಟುಮಾಡುವುದು. ಇಂಥಾ

ನಾರೀಮಣಿಯನ್ನು ಹೊಂದದಿರುವವನ ಜನ್ಮವು ವ್ಯರ್ಥವಾದದ್ದು. ಮಿತ್ರನೇ ಈ ಸಂತಾಪವನ್ನು ಹೇಗೆ ಸಹಿಸಲಿ ಎಂದು ತನ್ನ ಮಿತ್ರನಾದ ಪ್ರಹಸಿತನೊಂದಿಗೆ ಹೇಳುತ್ತಿರುವಾಗ ಅಂತಃಪುರದಲ್ಲಿರುವ ಅಂಜನಾದೇವಿಯನ್ನು ಕುರಿತು ಒಂದನೇ ಸಖಿಯಾದ ಕಾಂಚನಮಾಲೆಯು ಸಖಿ ಅಂಜನಾದೇವಿ ನಿನ್ನ ಪೂರ್ವಪುಣ್ಯದಿಂದ ಪವನಂಜಯನು ನಿನಗೆ ಪತಿಯಾದರೆ ರೋಹಿಣೀ ಚಂದ್ರರಂತೆ ಶೋಭಾಯಮಾನವಾಗಿ ವಿರಾಜಿಸುವುದು ಅವನನ್ನು ನೀನು ಪಡೆದರೆ ನನಗೆ ಮನೋಹರವಾಗುವುದಾದ್ದರಿಂದ ಆ ಪವನಂಜಯನೇ ನಿನಗೆ ಕಾಂತನಾಗಲಿ ಎಂದು ಹೇಳಲು ಎರಡನೇ ಸಖಿಯಾದ ಕಮಲಮಾಲಿನಿಯು ಒಂದನೇ ಸಖಿಯನ್ನು ಕುರಿತು, ಇದೇನು ನೀನು ಹೀಗೆ ಹೇಳುವೆ ? ಛೀ ಛೀ, ಬಿಡುಬಿಡು. ಇಂಥಾ ಮಾತುಗಳನ್ನಾಡಬೇಡ, ನಿನಗೆ ಬುದ್ಧಿಯಿಲ್ಲ ಆ ಪವನಂಜಯನು ನಮ್ಮ ಅಂಜನಾದೇವಿಯ ಅಂಗುಷ್ಟಕ್ಕೂ ಸಮನಲ್ಲ ಅವನನ್ನು ಹೊಂದಿದರೆ ಯಾವ ಸುಖವೂ ಇಲ್ಲ ಆದುದರಿಂದ ಈ ಮಾತನ್ನು ನಮ್ಮ ರಾಣಿಯ ಪುತ್ರಿಯಾದ ಅಂಜನೆಯೊಂದಿಗೆ ಆಡುವುದು ತುಂಬಾ ಅವಮಾನಕರವು ಎಂದು ಹೇಳಲು ಮೂರನೇ ಸಖಿಯಾದ ವಸಂತಮಾಲೆಯು ಎರಡನೇ ಸಖಿಯನ್ನು ಕುರಿತು,

ಹಾಡು—ರಾಗ—ಜಂಜೂಟಿ—ರೂಪಕತಾಳ.

ಯೇನನಾಡುವೆ । ಜ್ಞಾನವಿಲ್ಲದೆ । ಹೀನರಂದದೀ ॥ ಮೀನಕೇತನ । ರೂಪ
ನಾಂತಿಹ । ನನಿಲವನುತಾಂ ॥ ೧ ॥ ಧಾತ್ರಿಯೊಳಗೆ । ಚಿತ್ರರೂಪನು ।
ಚೈತ್ರಕಾಮನು ॥ ನೇತ್ರಾನಂದದಿಂದ ರಂಜಿಪ । ಖ್ಯಾತಿವಂತನೂ ॥ ೨ ॥
ರಾಜಾಧಿರಾಜನು।ತೇಜಃಪುಂಜನು। ರಾಜಮಾರ್ತಾಂಡನು।ರಾಜೀವನೇತ್ರೆ।
ನೋಜಿಗ ವದನವ ಸೇರಲು ॥ ೩ ॥

ಎಲೆ ಸಖಿ ನಿನಗೆ ಬುದ್ಧಿಶೂನ್ಯವಾಗಿ ಈ ಮಾತನ್ನು ಆಡುವೆಯೋ. ಛೀ ಛೀ ಇಂಥಾ ಮಾತುಗಳನ್ನು ಹೀನರಂತೆ ಆಡಬಾರದು ನಮ್ಮ ರಾಣಿಯ ಪುತ್ರಿಯ ಮುಂದೆ ನೀನು ಆ ವಾಯುಕುಮಾರನನ್ನು ಜರಿಯುವುದು ನಿನಗೆ ಸರಿಯಾದದ್ದಲ್ಲ ಜನ್ಮಾಂತರದ ಸುಕೃತವಿಶೇಷದಿಂದಲೇ ಆ ಪವನಂಜಯನನ್ನು ವಿವಾಹವಾದರೆ ಯೋಗ್ಯವಾಗಿರುತ್ತೆ. ಎಲೌ ಅಂಜನ ನೀನು ಅವನನ್ನೇ ವಿವಾಹವಾಗುವುದೇ ನಿನಗೆ ಅರ್ಹತೆಯು ಎನ್ನಲು ಆಗ ನಾಲ್ಕನೇ ಸಖಿಯಾದ

ಮಿಶ್ರಕೇಶಿನಿಯು ಮೂರನೇ ಸಖಿಯನ್ನು ಕುರಿತು, ಎಲೆ ಸಖಿ, ಏನು ನೀನು ಮತಿಶೂನ್ಯಳಾಗಿ ಹೀಗೆ ಮಾತನ್ನಾಡುತ್ತಿರುವೆ ಆ ಪವನಂಜಯ ಯಾವ ಘನರೂಪವಂತನೆಂದು ಹೊಗಳುತ್ತಿರುವಿ, ಸಾಕುಸಾಕು ಬಿಡು. ಆ ಕನಕ ಪುರದ ಹಿರಣ್ಯವರ್ಮರಾಜ ಮತ್ತು ಸುಮನಾದೇವಿ ಇವರೀರ್ವರ ಕುಮಾರ ನಾದ ವಿದ್ಯುತ್‌ಪ್ರಭನೆಂಬವನು ಮನ್ಮಥನನ್ನು ಹೋಲುವ ರೂಪುಲಾವಣ್ಯ ಗಳಿಂದ ಶೋಭಿಸುವವನಾಗಿದ್ದಾನೆ. ಅವನಂಥ ಸ್ಫುರದ್ರೂಪಿಗಳು ಖೇಚರ ರಲ್ಲಿಯೂ ಭೂಚರರಲ್ಲಿಯೂ ಯಾರೂ ಇಲ್ಲ. ಆದ್ದರಿಂದ ಅಂಜನಾದೇವಿಯು ಆ ವಿದ್ಯುತ್‌ಪ್ರಭನನ್ನು ವಿವಾಹವಾದರೆ ಸರ್ವೋತ್ತಮವಾದದ್ದು ಎಂದು ಹೇಳಲು ಈ ಮಾತುಗಳನ್ನು ಕೇಳುತ್ತಿದ್ದ ಅಂಜನೆಯು ಸುಮ್ಮನೆ ಮೌನದಿಂದ ಕುಳಿತಿರಲು, ಪವನಂಜಯನು ಈ ಮಾತುಗಳನ್ನು ಕೇಳಿ ಅತಿ ಕೋಪದಿಂದ,

ಪವನಂಜಯಗೆ ಕೋಪವು ಪೆರ್ಚಲು । ಚಂದ್ರಾಯುಧವನು ಹಿಡಿದು ।
ಝುಳಿಪಿಸುತೆ ॥ ಸಾಯುವಂತೀ ನಾರಿಯರನು ಕಡಿಯುವೆ । ಆ ವಿದ್ಯುತ್
ಪ್ರಭನಿವರರಕ್ಷಿಪನೇ ॥

ಮಿತ್ರನೇ ನೋಡಿದೆಯಾ ಈ ನಾರಿಯರು ನನ್ನನ್ನು ಜರಿಯುತ್ತಿರುವ ರಲ್ಲಾ. ಇವರನ್ನೀಗಲೇ ಶಿರಚ್ಛೇದನ ಮಾಡುವೆನು ನೋಡು ಎಂದು ಒರೆ ಯಿಂದ ಚಂದ್ರಾಯುಧವನ್ನು ಹಿರಿದುಕೊಂಡು ಕೈಯಲ್ಲಿ ಹಿಡಿದು ಆ ವಿದ್ಯುತ್ ಪ್ರಭನು ಇವರನ್ನು ರಕ್ಷಿಸುವನೋ ನೋಡೋಣ ಎಂದು ಚಂದ್ರಾಯುಧವನ್ನು ಝುಳುಪಿಸಲು ಆಗ ಮಿತ್ರನಾದ ಪ್ರಹಸಿತನು ಪವನಂಜಯನನ್ನು ತಡೆದು ಮಿತ್ರನೇ ಸ್ವಲ್ಪ ನಿಧಾನಿಸು ದುಡುಕಬೇಡ

ಹಾಡು—ರಾಗ—ತಾಳ

ಧರಣೇಂದ್ರ ಲಾಲಿಸೆನ್ನ ವಾಕ್ಯ । ಅರುಹುದು ಗ್ರಹಿಸಲು ಸೌಖ್ಯ ॥ ಪಲ್ಲ ॥
ನಾರಿಯ ಕೊಲ್ಲಲು । ಘೋರ ಪಾಪವು ಬಹುದು । ಕ್ರೂರನೆನ್ನುತೆ ನಿನ್ನ ।
ದೂರುವರು ಜನರು ॥ ೧ ॥ ಧರೆಯೊಳಪಕೀರ್ತಿ । ಬರುವುದೀದುರಿತದಿಂ ।
ಪರದೊಳು ನರಕವು ದೊರೆಯುವುದು ॥ ೨ ॥ ಖ್ಯಾತಿಯು ಸಲ್ಲದು ।
ಭೂತಳದೊಳಗಿದು । ನೀತಿಯಲ್ಲವು ಮಿತ್ರ । ಘಾತಿಸದು ಸ್ತ್ರೀಯರನ ॥೩॥

ಮಿತ್ರನೇ ಈ ಕೋಪವನ್ನು ಬಿಡು ಸ್ತ್ರೀವಧೆಯು ಘೋರಪಾಪಕರ ವಾದದ್ದು. ಆದರಿಂದ ರವರವ ನರಕವನ್ನು ಅನುಭವಿಸಬೇಕಲ್ಲದೆ ಇಹದ

ಲ್ಲಿಯೂ ಕೂಡ ಅಸಂತೋಷವೂ ಸಹ ಬರುವುದು ಆದ್ದರಿಂದ ಸಮಾಧಾನ ಚಿತ್ತನಾಗು ಎಂದು ಪ್ರಹಸಿತನು ನಾನಾವಿಧವಾಗಿ ನೀತಿಗಳನ್ನು ಪವನಂಜಯ ನಿಗೆ ಹೇಳಲು ಪವನಂಜಯನು,

ಕಂದ—ರಾಗ—ಮೋಹನ

ತನ್ನೊಳಗ ತೊತ್ತಿಯರಿಂ । ವನ್ನದಿನಿಂದಿಸಿದಕಾರಣದಿಯೆಂಜನೆಯಂ ॥
ಯನ್ನ ತೊತ್ತಿಯರ್ಗೆ ತೊತ್ತಂ । ನನ್ನಿಯಿದೆನ್ನಯ ಸುಮಿತ್ರ ಮಾಳ್ಪೆ ಕೇಳ್ಪೈ ॥

ಮಿತ್ರನೆ ಈ ಅಂಜನೆಯು ದಾದಿಯರಿಂದ ನನ್ನನ್ನು ನಿಂದಿಸುವಂತೆ ಅವ ಕಾಶ ಕೊಟ್ಟು ಸುಮ್ಮನೆ ಕುಳಿತಿದ್ದಾಳೆ. ನೋಡಿದೆಯೋ ಇವಳಲ್ಲಿದ್ದ ನನ್ನ ಮೋಹವು ಹೋಯಿತು ಸತಿಯರನ್ನು ಅಪೇಕ್ಷಿಸುವವನೇ ಅವಿವೇಕಿಯು ನಾವು ಇನ್ನು ಇಲ್ಲಿರತಕ್ಕದ್ದು ಸರಿಯಾದ್ದಲ್ಲ ನಡೆ ಕೂಡಲೇ ಹೋಗೋಣವೆಂದು ಬೇಗ ತನ್ನ ಮಂದಿರಕ್ಕೆ ಮಿತ್ರನೊಂದಿಗೆ ಬಂದು ಚಾರರನ್ನು ಕರೆದು ತಾನು,

ಪ್ಪೂರಿಗೆ ಪಯಣವ ಸಾರಲು ಬೇಕೆಂದು । ಚಾರನ ಮೂಲದಿ ಭೇರಿಯನು
ಭಾರಿಸೆ ಹೊರಟನು ಪರಿವಾರವೆರಸಿ ತಾನು । ಮೀರಿದ ಕೋಪದಿ ಜವ ದೊಳಗೆ ॥

ಊರಿಗೆ ಹೊರಡಬೇಕಾಗಿರುವುದರಿಂದ ಡಂಗೂರ ಭೇರಿಯನ್ನು ಹೊಯ್ಯುವಂತೆ ಚಾರನಿಗೆ ತಿಳಿಸಲು ಅದರಂತೆ ಭೇರಿಯನ್ನು ಹೊಯ್ಸಲು ಉರುತರವಾದ ಕೋಪದಿಂದ ಈ ಪವನಂಜಯನು ತನ್ನ ಪರಿವಾರದೊಂದಿಗೆ ತನ್ನ ರಾಜಧಾನಿಯಾದ ಆದಿತ್ಯಪುರಕ್ಕೆ ಬೇಗನೆ ಹೊರಟುಬರುತ್ತಿದ್ದಾನೆ. ಈ ಭೇರಿಯ ಶಬ್ದವನ್ನು ಕೇಳಿದ ಅಂತಃಪುರದಲ್ಲಿದ್ದ ಅಂಜನಾದೇವಿಯು ತನ್ನ ಸಖಿಯಾದ ವಸಂತಮಾಲೆಯನ್ನು ಕುರಿತು, ಸಖಿ ಇದೇನು ಈ ಭೇರಿಯ ಧ್ವನಿಯನ್ನು ಕೇಳಿದಮಾತ್ರದಿಂದಲೇ ನನ್ನ ಮನಸ್ಸು ಕಳವಳಿಸುವುದಲ್ಲಾ ಎನಲು ಆಗ ಆ ಸಖಿಯು ತಾಯಿಯೇ ಸಂಶಯವೇನು, ಪವನಂಜಯನು ತನ್ನ ಮನೋಭಿಪ್ರಾಯವನ್ನು ಯಾರಿಗೂ ತಿಳಿಸದೆ ತನ್ನ ರಾಜಧಾನಿಗೆ ಹೋಗುತ್ತಿದ್ದಾನೆ ಅವನಿಗೆ ಅತಿ ಕೋಪವುಂಟಾಗಿದೆಯೆಂದು ನನಗೆ ತಿಳಿಯ ಬರುತ್ತದೆಯೆಂದು ಅಂಜನೆಯೊಂದಿಗೆ ಸಖಿ ಹೇಳಲು ಆಗ ಅಂಜನಾದೇವಿಯು ಸಖಿಯನ್ನು ಕುರಿತು,

ಹಾಡು— ರಾಗ— ತಾಳ

ರಮಣನು ಪೋಗುವ । ಕ್ರಮವು ವಿಚಿತ್ರವು । ರಮಣಿಯ ತೊರೆದು । ಸುಮನಸವಿಲ್ಲದೆ ॥ ಪ ॥ ಜನಕನು ವಿವಹಕೆ । ಅನುವ ಮಾಡಿರುವೇಳೆ । ಯಿನಿಯನು ತನ್ನ ಪುರಿಗೆ । ಮನವಮಾಡಿ ಪೋಗುವರೇ ॥ ೧ ॥ ಯನ್ನ ಸಖಿಯರ । ಬನ್ನದ ನುಡಿಗಳಿಂ । ಖಿನ್ನಮಾನಸನಾಗಿ । ಭಿನ್ನವನೆ ಹಿಸುಕೆ ॥

ಸಖಿಯೇ ಇದೇನು ವಿಚಿತ್ರ. ಕಾಂತನಾದ ಪವನಂಜಯನು ಭೇರಿಯನ್ನು ಪೊಯ್ಸಿ ತನ್ನ ಊರಿಗೆ ಹೊರಟುಹೋದ ಕಾರಣವೇನಿರಬಹುದು-ಯೋಚಿಸಿ, ಈ ಸಖಿಜನರ ನಿಂದ್ಯಕರವಾದ ಮಾತುಗಳನ್ನೇನಾದರೂ ತಾನು ಕೇಳಿ ಕೋಪದಿಂದ ತನ್ನ ರಾಜಧಾನಿಗೆ ಹೋಗಿರಬಹುದಲ್ಲವೇ, ಹಾ ವಿಧಿಯೇ ಇನ್ನೇನು ಗತಿ ಮುಂದೇನು ಮಾಡುವುದು, ನಾನು ಇನ್ನು ಬ್ರಹ್ಮಚರ್ಯವ್ರತವನ್ನು ಅಂಗೀಕರಿಸಬೇಕಾಯಿತು. ಸಖಿ ಈ ಸಂತಾಪವನ್ನು ಹೇಗೆ ಸಹಿಸಲಿ ಎಂದು ಅಂಜನೆಯು ಸಖಿಯೊಡನೆ ಪ್ರಲಾಪಿಸುತ್ತಿರಲು ಸಖಿಯು ಅಂಜನೆಯನ್ನು ಕುರಿತು ಅಮ್ಮಾ ನೀನು ಏತಕ್ಕಿಷ್ಟು ಬೇರೊಂದು ವಿಧವಾಗಿ ಚಿಂತಿಸುತ್ತೀಯೆ ನಿನ್ನ ಮನೋದೃಢವು ಈರೀತಿ ಇರುವಲ್ಲಿ ಆತನೇ ನಿನಗೆ ಕಾಂತನಾಗುವುದರಲ್ಲಿ ಸಂಶಯವೇನೂ ಇರಲಾರದು ನಿಮ್ಮ ಮಾವನಾದ ಪ್ರಹ್ಲಾದ ಮಹಾಜನೊಡನೆ ನೀನು ಅಪೇಕ್ಷಿಸುವ ಪವನಂಜಯನಿಗೆ ಬುದ್ಧಿವಾದವನ್ನು ಹೇಳುವ ಉದ್ದಿಶ್ಯ ನಮ್ಮ ಮಹೇಂದ್ರರಾಜನು ಹೋಗಿರುವನು, ಚಿಂತಿಸದೆ ಇರು ಎಂದು ಸಖಿಯು ಅಂಜನಾದೇವಿಗೆ ಹೇಳಿ ಸಮಾಧಾನಪಡಿಸಿದಳು. ಇತ್ತ ಪ್ರಹ್ಲಾದರಾಜನು ತನ್ನ ಪುತ್ರನಾದ ಪವನಂಜಯನು ತನ್ನ ಪಟ್ಟಣಕ್ಕೆ ಹೋಗುತ್ತಿರುವುದನ್ನು ತಿಳಿದವನಾಗಿ ಬೇಗ ಬಂದು ತನ್ನ ಮಗನ ಪ್ರಯಾಣವನ್ನು ನಿಲ್ಲಿಸಿ ಪವನಂಜಯನನ್ನು ಕುರಿತು,

ಕಂದ

ಏತಕೆ ಕೋಪವು ಕಂದನೇ । ನೀತಿಯ ತಿಳಿಯದೆ ದುಗುಡದಿ ಪುರಿಗೆ ಪೋಪುದು ತರವೇ ॥ ಯಾತರ ನಡತೆಯು ನಿನಗಿದೂ । ಜಾತನೆ ಪಿತೃ ವಾಕ್ಯ ಪರಿಪಾಲಿಸಲುಚಿತವು ಧರೆಯೋಳ್ ॥

ಸುಕುಮಾರನೇ ನೀನುಕೋಪವನ್ನು ಬಿಟ್ಟು ಹಿಂತಿರುಗಿಬಂದು ವಿವಾಹವನ್ನು ಮಾಡಿಕೊ ಪರಿಹಾಸ್ಯಕ್ಕೆ ಗುರಿಮಾಡಬೇಡ. ಗುರು, ತಂದೆ, ತಾಯಿ

ಇವರುಗಳ ಮಾತನ್ನು ಮೀರುವುದು ನ್ಯಾಯವಲ್ಲ ಆದ್ದರಿಂದ ವಿವಾಹಕ್ಕೆ ಸಮ್ಮತಿಸು ನಡೆ ಹೋಗೋಣ ಎನಲು ಪವನಂಜಯನು ತನ್ನ ಮನಸ್ಸಿನಲ್ಲಿ ನನ್ನ ತಂದೆಯ ಆಜ್ಞೆ ಪ್ರಕಾರ ವಿವಾಹವಾಗಿ ಬಳಿಕ ಈ ಅಂಜನೆಯನ್ನು ತ್ಯಜಿಸಿ, ಸೆರೆಮನೆಯಲ್ಲಿಡುವೆನು ಎಂದು ತನ್ನ ಅಂತರಂಗದಲ್ಲಿ ಯೋಚಿಸಿಕೊಂಡವನಾಗಿ ತನ್ನ ತಂದೆಯ ಸಂಗಡ ಹೊರಟುಬಂದು ತನ್ನ ಪಟ್ಟಣ ಸೇರಿದನು. ಅನಂತರ ಮಹೇಂದ್ರರಾಜನು ವಧೂವರರಿಗೆ ಮಂಗಳಸ್ನಾನವನ್ನು ಮಾಡಿಸಿ ವರಪೂಜೆಯನ್ನು ಮಾಡಿ ಬಂಧುಗಳು ವೈದಿಕರು ಮುಂತಾದವರೆಲ್ಲರೂ ಸೇರಿ,

ಸುರುಚಿರಲಗ್ನದಿ ಪವನಂಜಯಗೆ । ತರುಣಿ ಶಿರೋಮಣಿ ಅಂಜನೆಯಾ ||
ಹರುಷದಿ ವಿವಹವನೆಸಗಿದ ಮಾಹೇಂದ್ರನು । ವೆರಸಿ ಬಂಧುಗಳ ವಿಭವದೊಳು ||

ಶುಭಲಗ್ನದಲ್ಲಿ ವಧೂವರರಿಗೆ ವಿವಾಹಮಹೋತ್ಸವವನ್ನು ನೆರವೇರಿಸಿ ಹೋಮ ಮುಂತಾದ ವಿಧಿಗಳನ್ನು ನಡೆಯಿಸಿ ನಾಲ್ಕನೇ ದಿವಸದಲ್ಲಿ ನಾಗಬಲಿ ಮಹೋತ್ಸವವನ್ನು ನೆರವೇರಿಸಿ ಸರ್ವರಿಗೂ ಸಂತರ್ಪಣೆಗಳನ್ನು ಮಾಡಿಸಿ ಸಂತೈಸಿ ಸರ್ವರಿಗೂ ಫಲತಾಂಬೂಲ ವಿನಿಯೋಗಿಸಿ ವೈದಿಕರಿಗೆ ದಾನದಕ್ಷಿಣೆಗಳಿಂದ ಸನ್ಮಾನಿಸಿ ಇಷ್ಟಮಿತ್ರಬಂಧುಗಳಿಗೆ ಯೋಗ್ಯತೆಗೆ ತಕ್ಕಂತೆ ಸಂಭಾವನೆಗಳನ್ನು ಮಾಡಿ ವಿವಾಹಕಾರ್ಯವನ್ನು ವೈಭವದಿಂದ ನೆರವೇರಿಸಿದನಂತರ ಪ್ರಹ್ಲಾದರಾಜನು ತನ್ನ ಸೊಸೆಯಾದ ಅಂಜನಾದೇವಿಯನ್ನು ತಮ್ಮ ಊರಿಗೆ ಕಳುಹಿಸಿಕೊಡಬೇಕೆಂದು ಮಾಹೇಂದ್ರರಾಜನನ್ನು ಕೇಳಲು ಆಗ ಮಾಹೇಂದ್ರನು ಮಗಳಿಗೆ ದಿವ್ಯ ವಸ್ತ್ರಾಭರಣಗಳಿಂದ ಅಲಂಕಾರ ಮಾಡಿಸಿ,

ತನುಜೆಗೆ ವಸ್ತ್ರಾಭರಣವನಿತ್ತು । ಜನಕನು ಹರಸುತ ಅಂಜನೆಯಂ ||
ವಿನಯದಿ ಮಾತುಳ ಗೃಹವನು ಸಾರಲು । ಅನುನಯದಿಂದಲಿ ಕಳುಹಿದನು ||

ತನ್ನ ಪುತ್ರಿ ಅಂಜನಾದೇವಿಗೆ ಅನೇಕ ವಸ್ತು ದಿವ್ಯವಾದ ಆಭರಣಗಳನ್ನು ಬಳುವಳಿಯಾಗಿ ಕೊಟ್ಟು ಅನೇಕ ಮಂದಿ ಸಖೀದಾದಿಯರನ್ನು ಅವಳೊಡನೆ ಇರಬೇಕೆಂದು ನಿಯಮಿಸಲು ಅಂಜನಾದೇವಿಯು ತಂದೆತಾಯಿಗಳಿಗೆ ನಮಸ್ಕಾರ ಮಾಡಿ ನಾನು ಹೋಗಿಬರುತ್ತೇನೆ, ಅಪ್ಪಣೆ ಕೊಡಿ ಎಂದು ಕೇಳಲು ಅವರು ಮಗಳಿಗೆ ಆಶೀರ್ವಾದ ಮಾಡಿ ಎಷ್ಟು ದಿವಸಗಳಾದಾಗ್ಯೂ

ಹೆಣ್ಣುಮಕ್ಕಳಿಗೆ ಪತಿಗೃಹ ವಾಸವು ಸಹಜವೇ ಆದ್ದರಿಂದ ನೀನು ಹೋಗಿ ಬಾ ಅಂಜನೆ ಎಂದು ಅಮ್ಮ ಉಭಯಕುಲಕೀರ್ತಿಪ್ರದಳೂ, ಸುಮಂಗಲೆಯೂ, ದೀರ್ಘಾಯುಷ್ಯವಂತಳೂ ಆಗಿ ಸುಖದಿಂದ ಜೀವಿಸು, ಹೋಗಿ ಬಾ ಎಂದು ಆಶೀರ್ವಾದ ಮಾಡಿ ಮಗಳನ್ನೂ, ಬೀಗರನ್ನೂ, ಅಳಿಯನನ್ನೂ ಉಪಚರಿಸಿ ಕಳುಹಿಸಿಕೊಡಲು ಪ್ರಹ್ಲಾದರಾಜನು ಸೊಸೆ ಮಗನನ್ನು ಸಹ ಕರೆದುಕೊಂಡು ತನ್ನ ಪರಿವಾರದೊಂದಿಗೆ ವೈಭವದಿಂದ ತನ್ನ ರಾಜಧಾನಿಯಾದ ಆದಿತ್ಯಪುರಕ್ಕೆ ಬಂದು ಸೇರಿ ಗೃಹಪ್ರವೇಶ ಮಾಡಿ ಇರುತ್ತಿರಲು ಪುತ್ರನಾದ ಪವನಂಜಯನು ತನ್ನ ಪತ್ನಿಯಾದ ಅಂಜನೆಯಲ್ಲಿ ಬೆರೆಯದೆ ಅವಳನ್ನು ಮಾತನಾಡಿಸದ ಬೇರೆ ಅಂತಃಪುರದಲ್ಲಿರಿಸಿ ಆ ದಾದಿಯರನ್ನು ಅಲ್ಲಿರಿಸಿ ತಾನು ಅಲ್ಲಿಗೆ ಪ್ರವೇಶಿಸದೆ,

ತರುಣಿ ಅಂಜನೆಯೊಳು ವಾಯು ಕುಮಾರನು। ಬೆರೆಯದೆ ಅವಳನು ನೆರೆ ಯೊಳಗೆ। ಇರಿಸುತೆ ಕೋಪದಿ ಮುಖವನು ನೋಡದೆ। ನಿರುತವು ಕಾಲವ ಕಳೆಯುತಿರೆ ||

ಅವನಿಗೆ ಉಗ್ರಕೋಪವಂಕುರಿಸಿ ಅಂಜನಾದೇವಿಯ ಮುಖವನ್ನು ಸಹ ನೋಡದೆ ತನ್ನ ರಾಜಕಾರ್ಯದಲ್ಲಿ ಕಾಲವನ್ನು ಕಳೆಯುತ್ತಿದ್ದನು ಇತ್ತ ಅಂತಃಪುರದಲ್ಲಿ ಅಂಜನಾದೇವಿಯ ತನ್ನ ಸಖಿಯರೊಂದಿಗೆ ತನಗೆ ಉಂಟಾಗಿ ರುವ ವ್ಯಥೆಯನ್ನು ಹೇಳಲು ಸಖಿಯುರನ್ನು ಕುರಿತು—

ರಾಗ—ಮುಖಾರಿ—ಆದಿತಾಳ—(ನೀ ಕರುಣಿಸುವುದು)

ಸೈರಿಸಲಾರೆ ನಾನು। ಪ್ರಿಯುನಖಿಯೆ ಕೇಳು ||ಪಲ್ಲ|| ಜೀವಿಕೇಶನು ಎನ್ನ। ಭಾವಿಸ ಬಾರಬೆ ಪ್ರಿಯವ ತೋರದೆ। ಹೇಯ ಮಾಡಿಹನೆನ್ನ ||೧|| ಏತಕೆ ಬಾರನು। ನಾಥ ವಾಯುಸುತ। ಪ್ರೀತಿಯ ತೋರದೆ। ಕಾತರಿಪಲು ಮನ ||೨|| ಧರೆಯೊಳೆಂತು ನಾನು। ಇರುವುದು ತರವಲ್ಲ। ಹರಣವ ನೀಗುವೆನು। ಕರುಣವ ತೋರೋಜಿನ || ೩ ||

ನನ್ನ ಪ್ರಾಣಕಾಂತನು ವಿವಾಹವಾದಲಾಗಾಯ್ತು ಇದುವರಿವಿಗೂ ಯಾತಕ್ಕೋಸ್ಕರ ಬರಲಿಲ್ಲ ಹಾ ಪ್ರಿಯಸಖಿ ನಾನು ಹೇಗೆ ಜೀವಿಸಲಿ ಎಂದು ಮೂರ್ಛಾಕ್ರಾಂತಳಾದಳು ಸಖಿಯರು ಶೈತ್ಯೋಪಚಾರ ಮಾಡಲು ಪನ್ನೀರನ್ನು ಹಾಕಿ ಬೀಸಣಿಗೆಯಿಂವ ಗಾಳಿ ಬೀಸಿ ಉಪಚರಿಸಲು ಅಂಜನೆಯು ಸ್ವಲ್ಪ ಚೇತರಿಸಿಕೊಂಡವಳಾಗಿ ಹಾ ವಿಧಿಯೇ ನನ್ನನ್ನು ಈ ದುಃಖಕ್ಕೆ ಗುರಿ

ಮಾಡಿದೆಯೂ ಮುಂದೇನು ಗತಿಯೆಂದು ನಿಟ್ಟುಸಿರು ಬಿಡುತ್ತಾ ಸಂಕಟ ದಿಂದ–

ರಾಗಕಾನದ-ಆದಿತಾಳ (ಕೊಂಡುಕೊಂಬುವೆನ್ನ)

ಕಲುಷ ಬಿಡದು ಮುನ್ನ। ಯೆಲೆ ಚೇಟಿಗಳಿರಾ ಯೆನ್ನ । ಪಲ್ಲ॥ ಕಣ್ಣೆತ್ತಿ ಕಾಂತನು। ಬಣ್ಣಿಸಿ ಮಾತಾಡನು। ಎಣ್ಣೆಯ ಸೋಣಪಂತೆ। ಪಣ್ಣಪಲಾ ಪೆನು ॥೧॥ ಎನ್ನ ಹರೆಯವು ಮನ। ದನ್ನಮೊಳ್ ಜಾರದೆ। ಪನ್ನೊಂದು ವರ್ಷವು। ಖಿನ್ನದಿಂ ಕಳೆದವು ॥೨॥ ಮನಸಿಜ ಬಾದೆಯಿಂ ತನುವು ಸುಡು ತಿಹುದು। ಇನಯುನೆಂದಿಗೆ ಬಂದು। ಮನಹರುಷ ವೀವನೋ ॥೩॥

ಹಾ ದೈವವೇ ನನ್ನ ಜನ್ಮಾಂತರ ಕೃತ ಪಾಪದ ಕರ್ಮವು ಇನ್ನೂ ನಮೆದುದಿಲ್ಲ ನಾನು ಮಹಾಪಾಪಿಯು, ಭೂ ಭಾರಕಳು, ಕಾಂತನನ್ನು ಕಾಣದೆ ಹನ್ನೊಂದು ವರ್ಷಗಳು ಕಳೆಯುತ್ತಾ ಬಂದಾಗ್ಯೂ ಈ ಕಷ್ಟವು ಪರಿ ಹಾರವಾಗದೆ ಸಂಕಟಪಡುತ್ತಿರುವೆನಲ್ಲಾ, ಅಯ್ಯೋ ವಿಧಿಯೆ, ಇನ್ನೇನು ಗತಿ, ಈ ಭೂಮಿಯ ಮೇಟಿ ನಾನು ಜೀವಿಸಿರುವುದಕ್ಕಿಂತಲೂ ಪ್ರಾಣಬಿಡುವುದೇ ಲೇಸು, ಹಾ ಸಖಿಯೆಂದು ಮೂರ್ಛೆ ಹೊಂದಿ ದಲದ ಮೇಲೆ ಬೀಳಲು ದಾದಿ ಯರು ಶೈತ್ಯೋಪಚಾರ ಮಾಡುತ್ತಾ ಸಖಿಯರು ಅಂಜನಾದೇವಿಯನ್ನು ಕುರಿತು

ರಾಗ ಹಿಂದೂಸ್ಥಾನಿ–ಆದಿತಾಳ

ಏಳು ಹರಿಣಾಕ್ಷಿ ನೀರೆ। ತಾಳು ಸ್ಥೈರಿನಮ್ಮಾ ಧೀರೆ ॥ಪಲ್ಲ॥ ಅರಳಂ ಬನಾ ಟಿನೀ। ಪರಿಮೂರ್ಛೆಯಾಗೆ। ಪರಿಹರಿನೆದೆ ಶಿಶಿರೋಪಚಾರದಿ॥ಅನು ಪಲ್ಲ॥ ವಾರಿಧಿಗಂಭೀರೆ। ಕೀರಪಿಕಸ್ವರೆ। ನಾರನಮ್ಮ ದೂಕ್ತಿಯ। ತೋರೆ ಮನೋ ಹರೇ ॥೧॥

ತಾಯಿಯೆ ದುಃಖಿಸದಿರು ಹೀಗಾದುದು ನಿನ್ನ ಕರ್ಮೋದಯವು ಭಗ ವಂತನನ್ನು ಭಜಿಸು. ಸುಮ್ಮನೆ ಕಳವಳಿಸಿ ಪದೇ ಪದೇ ಮೂರ್ಛೆಯಾಗು ತ್ತೀಯೆ ವಿರಹವನ್ನು ಸೈರಿಸು ಸೈರಿಸು, ಚಿಂತೆಯನ್ನು ಬಿಡು ಸಮಾಧಾನ ಚಿತ್ತೆಳಾಗೆಂದು ಸಖಿಯರು ಅಂಜನೆಗೆ ಹೇಳಲು ಅವಳು ಸಖಿಯರನ್ನು ಕುರಿತು ಹಾ ಸಖಿಯರೇ ನನ್ನ ಜನ್ಮವು ಅಸಾರ್ಥಕವಾದದ್ದು ನನ್ನ ವಿವಾಹವಾದಾರಭ್ಯ ಹನ್ನೊಂದು ವರ್ಷಗಳ ಕಾಲ ಕಳೆದು ಹೋದಾಗ್ಯೂ ಪ್ರಾಣಕಾಂತನ ಮುಖ ದರ್ಶನವಿಲ್ಲದೆ ಬಹು ವ್ಯಥೆಯನ್ನು ಪಡುತ್ತಿದ್ದೇನೆ ಪೂರ್ವಜನ್ಮದಲ್ಲಿ ನಾನು

ಯಾರ ಬಾಳಿಗೆ ವೈರಿಯಾಗಿದ್ದೆನೋ ಅದರ ಫಲವನ್ನು ಈಗ ನಾನು ಅನುಭವಿಸಬೇಕಾದುದೇ ಧರ್ಮವು. ಎಂದು ಪ್ರಲಾಪಿಸುತ್ತ ಅರಹಂತ ವೀತರಾಗನೇ ನನ್ನ ಸಂಕಟಗಳನ್ನು ಪರಿಹರಿಸು ಎಂದು ದುಃಖಿಸುತ್ತಿದ್ದಾಳೆ

ಇತ್ತ ಲಂಕಾಧಿಪತಿಯಾದ ರಾವಣೇಂದ್ರನು, ಪಾತಾಳ ಪುಂಡರೀಕಿಣೀ ಪುರದ ವರುಣ ರಾಜನು ತನಗೆ ಕಪ್ಪವನ್ನು ಸಲ್ಲಿಸಿ ನನ್ನ ಅಧೀನದಲ್ಲಿರಬೇಕೆಂದು ಆ ವರುಣ ರಾಜನ ಬಳಿಗೆ ಚರರನ್ನು ಕಳುಹಿಸಲು ಆ ವರುಣನು ರಾವಣೇಂದ್ರನ ಮೇಲೆ ಕೋಪಾದಿವಿಷ್ಟನಾಗಿ ತನ್ನ ಸೈನ್ಯ ಪರಿವಾರ ಸಮೇತ ಯುದ್ಧಕ್ಕೆ ಹೊರಟು ರಾವಣೇಂದ್ರನ ಸೈನ್ಯದೊಡನೆ ಯುದ್ಧಮಾಡಿ, ಕುಂಭಕರ್ಣ, ಇಂದ್ರಜಿತು, ವಿಭೀಷಣ, ಮೇಘವಾಹನ ಮುಂತಾದವರನ್ನು ಸೋಲಿಸಿ. ವಿಮುಖರನ್ನಾಗಿ ಮಾಡಿ ಖರದೂಷಣರನ್ನು ಕೈಸೆರೆ ಹಿಡಿಯಲು ಆ ರಾತ್ರಿ ರಾವಣನು ಇದಕ್ಕೇನುಮಾಡುವುದು ಎಂದು ಮಂತ್ರಿಯನ್ನು ಕೇಳಲು ಆ ಮಂತ್ರಿಯು ಸಾರ್ವಭೌಮನೇ, ಆದಿತ್ಯಪುರದ ಪ್ರಹ್ಲಾದರಾಜನಿಗೆ ಪತ್ರವನ್ನು ಬರೆದು ಕಳುಹಿಸಿ ಅವನನ್ನು ಯುದ್ಧಕ್ಕೆ ಕರೆಯಿಸಿ ಅವನಿಂದ ಜಯವನ್ನು ಪಡೆಯಬಹುದೆಂದು ಹೇಳಲು ಅದರಂತೆ ಪತ್ರವನ್ನು ಬರೆಯಿಸಿ ಚರರ ಕೈಯಲ್ಲಿ ಕಳುಹಿಸಲು ಆ ಚರರು ಈ ಆದಿತ್ಯಪುರದ ಪ್ರಹ್ಲಾದರಾಜನು ಆಸ್ಥಾನದಲ್ಲಿ ಹಿಡ್ಡೋಲಗದಲ್ಲಿರುವ ಸಮಯದಲ್ಲಿ ಬಂದು ಈ ಪತ್ರವನ್ನು ರಾಜನ ಮುಂದಿರಿಸಿ ಎರಗಿ ಕೈ ಮುಗಿದು ನಿಂತಿರಲು ಪ್ರಹ್ಲಾದರಾಜನು ಆ ಪತ್ರವನ್ನು ಓದಿಸಿ ಕೇಳಿಕೊಂಡು ಒಳ್ಳೇದು, ನಾನು ಬರುವೆನೆಂದು ರಾವಣೇಂದ್ರನಿಗೆ ತಿಳಿಸು ಎಂದು ಚರನನ್ನು ಕಳುಹಿಸಿ, ತಾನು ಯುದ್ಧಕ್ಕೆ ಹೊರಡಲು ಸಿದ್ಧನಾಗುತ್ತಿರುವ ಸಮಯದಲ್ಲಿ ಪವನಂಜಯನು ಬಂದು ತಂದೆಗೆರಗಿ ಅವನನ್ನು ಕುರಿತು,

ಕಂದ—ರಾಗ—ಬೇಗಡೆ

ಸುಮ್ಮಾನದಿ ರಣಭೇರಿಯ । ನಮ್ಮನೇ ನೀವು ಪೊಯ್ಸಿ ಸೇನೆಯ ನಡೆಸು
ವುದೆನ್ನುತೆ । ಚುಮ್ಮಿಸೆ ಸೇನಾಪತಿಯಂ । ದಿಮ್ಮನೆಯದ ಕೇಳಿ ಸಭೆಗೈ
ತಂದೇ ॥

ತಂದೆಯೆ ರಣಭೇರಿಯ ಶಬ್ದವನ್ನು ಕೇಳಿ ನಿನ್ನ ಸನ್ನಿಧಾನಕ್ಕೆಬಂದಿರುವ ಪುತ್ರನಮೇಲೆ ಕೃಪೆಮಾಡಿ ಆ ವರುಣನ ಸಮರಕ್ಕೆ ಹೋಗಲು ನನಗೆ ಅಪ್ಪಣೆಯಾಗಬೇಕೆಂದು ಬೇಡುತ್ತೇನೆ ಎನಲು ಆದಕ್ಕಾ ಪ್ರಹ್ಲಾದನು ಪುತ್ರ ಪವನಂ

ಜಯನೇ ನೀನಿನ್ನೂ ಚಿಕ್ಕವಯಸ್ಸುಳ್ಳವನಾದುದರಿಂದ ಅಧಿಕಬಲವುಳ್ಳ ಸಂಗ್ರಾಮಕ್ಕೆ ಹೋಗುವುದು ನಮಗಿಷ್ಟವಿಲ್ಲವೆನಲು ಆಗ ವಾಯುಕುಮಾರನು,

ರಾಗ—ತೋಡಿ—ಆದಿತಾಳ—(ಒಲುಮೆಯಿಂದ)

ಜನಕ ಪ್ರೇಮ ನಾನೀಗಲು ಮನಸ್ಸೋಲ್ದು ನೀರಣಕಾಜ್ಞೆಕೊಡು ॥ ಪ ॥ ವಾರಿಜ ಮೂಲವನು । ವಾರಣವು ಕೀಳುವೋಲು ವೈರಿಕುಲವನು ಯಮ ಗಾರೋಗಣೆ ಮಾಳ್ಪೆ ॥ ೧ ॥ ಚಿತ್ತದೊಳು ಯೋಚಿಸದೆ ಬಿತ್ತರದಿ ಕಳುಹಿಸು । ಮತ್ತರನುಧುರದೊಳು । ಉತ್ತರಿಸುವೆನು ನಾನು ॥ ೨ ॥ ಚಿಕ್ಕವನು ಯೆಂದು ಮನ । ಕಕ್ಕುಲಿತೆ ಬೇಡ ಮುದ । ವುಕ್ಕುವವೋಲರಿಗಳ । ನೊಕ್ಕನು ಮುರಿಯುವೆ ॥ ೩ ॥

ಜನಕನೇ ಆನೆಯ ಹಿಂಡಿಗೆ ಸಿಂಹದ ಮರಿಯಂತಿರುವೆನೆಂದು ತಿಳಿದು ನಾನು ಯುದ್ಧಕ್ಕೆ ಹೊರಡಲು ನನಗೆ ಅಪ್ಪಣೆಯಾಗಬೇಕೆಂದು ಕೇಳಿ ತಂದೆಯನ್ನು ಸಮ್ಮತಿಸಿ ಆವನ ಪಾದಗಳಿಗೆ ನಮಸ್ಕರಿಸಿ ಅವನಿಂದ ಅಪ್ಪಣೆಯನ್ನು ಪಡೆದು ಆಶೀರ್ವಾದವನ್ನು ಹೊಂದಿ ಅಲ್ಲಿಂದ ತಾಯಿಯ ಬಳಿಗೆ ಬಂದು ನಮಸ್ಕಾರ ಮಾಡಿ ತಾಯಿಯೇ ಸಮರಕ್ಕೆ ನಾನು ಹೊರಡಲು ಅಪ್ಪಣೆಯಾಗಬೇಕಂದು ಕೇಳಲು ಆಗ ತಾಯಿಯಾದ ಕೇತುಮತಿಯು ಪುತ್ರನನ್ನು ಕುರಿತು

ಕಂದ—ರಾಗ—ನಾದನಾಮಕ್ರಿಯೆ

ತನುಜನೆ ಜಿನಪತಿ ಪೂಜೆಯ । ಘನತರದಿಂ ರಚಿಸಿ ಹಡೆದೆ ನಿನ್ನ ಪೂರ್ವ ಸುತನಂ ॥ ದನುಜಪತಿ ಕೂಟಕೀಗಳ್ । ಮನಮೊಲಿದಿಂದೀತು ನಿನಗೆ ಹಾ ಬೀಳ್ಕೊಟ್ಟಂ ॥

ಹಾ ಕಂದನೇ ಅರಹಂತನ ಪೂಜೆಯನ್ನು ನಾನು ಘನತರವಾಗಿ ಮಾಡಿ ನಿನ್ನ ಓರ್ವ ಪುತ್ರನನ್ನು ಪಡೆದು ಸಂತೋಷದಿಂದಿರುವಾಗ ಇನ್ನೂ ಬಾಲಕನಾದ ನಿನ್ನನ್ನು ಯುದ್ಧಕ್ಕೆ ಹೋಗುವಂತೆ ಮಹಾರಾಜನು ನಿನಗೆ ಅಪ್ಪಣೆಯನ್ನು ಕೊಟ್ಟನೇ. ಅಯ್ಯೋ ವಿಧಿಯೇ ನನ್ನನ್ನು ಈ ವ್ಯಥೆಗೆ ಗುರಿಮಾಡಿದೆಯಾ ಎಂದು ಚಿಂತಿಸುತ್ತಿರಲು ಆಗ ಪವನಂಜಯನು ತಾಯಿಯನ್ನು ಕುರಿತು

ಕಂದ—ರಾಗ—ಭೈರವಿ.

ಜನನಿಯೆ ಕೇಳ್ ನಿನ್ನಯ । ಮನ ಹರ್ಷವಮಾಳ್ಪ ತೆರದಿ ಪರಬಲ ಜಯಿ

ಸುತ || ವನಧಿಪತಿ ಸುತರ ಕಾಣ್ಕೆಯ | ದನುಜಾಧಿಪಗಿತ್ತುಬಹೆನು ಸಂಶಯ ಬೇಡಾ ||

ಮಾತೆಯೆ ಚಿಂತೆಯನ್ನು ಬಿಟ್ಟು ಸಮಾಧಾನಚಿತ್ತಳಾಗು ನಾನು ಬಾಲಕನಾದರೂ ನೀನು ಭಯಪಡಬೇಡ ನಿನ್ನ ಮನಸ್ಸು ಹರ್ಷವಾಗುವಂತೆ ಪರಬಲವನ್ನು ಜಯಿಸಿಬರುವೆನು, ಸಂಶಯಪಡಬೇಡ. ಆದ್ದರಿಂದ ಬೇಗ ಅಪ್ಪಣೆಕೊಡು, ಚಿಂತಿಸಬೇಡ ಎನಲು ತಾಯಿಯಾದ ಕೇತುಮತಿಯು ಪವನಂ ಜಯನಿಗೆ ಆಶೀರ್ವಾದ ಮಾಡಿ ಮಗನೇ ಜಯಶೀಲನಾಗಿ ಹೋಗಿಬಾ ಎನಲು ಆಗ ಅಲ್ಲಿಂದ ಬಂದು ಯುದ್ಧಕ್ಕೆ ಶೃಂಗಾರವಾಗಿ ಸೈನ್ಯವನ್ನು ಸಿದ್ಧಗೊಳಿಸಿ

ವರುಣನ ಜೈಸಲು ವಾಯುಕುಮಾರನು | ತ್ವರಿತದಿ ಪೊಯಿಸುತೆ ಭೇರಿ ಯನು || ಉರುತರ ಮಂದಿಯೊಳ್ವೆರಸಿ ತಾ ಹೊರಡಲು | ಪುರದ ಜನರು ತಾವು ನೋಡುತಲೆ ||

ಅನೇಕ ಮಂದಿ ಮಾರ್ಬಲದೊಂದಿಗೆ ರಣಭೇರಿಯನ್ನು ಪೊಯ್ಸಿ ಯುದ್ಧಕ್ಕೆ ಹೊರಟು ಪಟ್ಟಣದ ಬೀದಿಯಲ್ಲಿ ಬರುತ್ತಿರುವಾಗ ಅಂತಃಪುರದಲ್ಲಿದ್ದ ಅಂಜನಾದೇವಿಯು ಇದೇನು ರಣಭೇರಿಯ ಶಬ್ದವು ಕೇಳಿಬರುತ್ತಿರುವುದು ಎಂದು ತನ್ನ ಸಖಿಯರನ್ನು ಕೇಳಲು ಅದಕ್ಕಾಸಖಿಯರು ಅಂಜನೆಯನ್ನು ಕುರಿತು ತಾಯಿಯೆ ವರುಣನನ್ನು ಜೈಸಲು ನಿಮ್ಮ ಮಾತುಳನಾದ ಪ್ರಹ್ಲಾದ ರಾಜನು ನಿನ್ನ ಪತಿಗೆ ಯುದ್ಧಕ್ಕೆ ಹೋಗುವಂತೆ ಆಜ್ಞೆಮಾಡಿ ಕಳುಹಿಸಿರು ತ್ತಾನೆ ಎನಲು ಆಗ ಅಂಜನಾದೇವಿಯು ದುಃಖದಿಂದ ನೆಲದಮೇಲೆ ಬಿದ್ದು ಹೊರಳುತ್ತಾ ಅಯ್ಯೋ ವಿಧಿಯೇ ನಾನು ಇನ್ನು ಹೇಗೆ ಜೀವಿಸಲಿ ? ನನ್ನ ವಿವಾಹವಾದಾರಭ್ಯ ಹನ್ನೊಂದು ವರುಷಗಳು ಕಳೆದುಹೋದಾಗ್ಯೂ ಪತಿಯ ಸುಖವನ್ನು ಕಾಣದೆ ದುಃಖಸಂಕಟಗಳನ್ನು ಅನುಭವಿಸುತ್ತಿರುವ ಪಾಪಿಯಾದ ನನಗೆ ಈಗ ಈ ವ್ಯಥೆಗೆ ಕಾರಣವಾಯಿತು. ಅಯ್ಯೋ ದೈವವೇ ಪತಿಯು ಯುದ್ಧಕ್ಕೆ ಹೋದರೆ ನನ್ನ ಗತಿಯೇನು ಎಂದು ದುಃಖಿಸುತ್ತಿರಲು ಸಖಿಯು ಅವಳನ್ನು ಕುರಿತು ಅಮ್ಮಾ ರಾಣಿಯೆ ನಿನ್ನ ಆರ್ತಧ್ವನಿಯನ್ನು ಯಾರುತಾನೆ ಸೈರಿಸಲಾದೀತು ? ಈಗ ನಿನ್ನ ಪತಿಯು ಯುದ್ಧಸನ್ನದ್ಧನಾಗಿ ಈ ಮಾರ್ಗವಾ ಗಿಯೇ ಬರುತ್ತಿರುವನು. ಆ ಸಮಯದಲ್ಲಿ ನಿನ್ನ ಪತಿಯನ್ನು ಈ ದ್ವಾರದ ಬಳಿ ನಿಂತು ಬೇಡಿಕೊಂಡರೆ ಆಗ ನಿನ್ನ ಪತಿಯ ಮನೋಭಾವವು ಅರಿಯು

ವುದು ಎಂದು ಹೇಳಲು ಆಗ ಅಂಜನೆಯು ತನ್ನ ಪತಿಯು ತನ್ನ ಅಂತಃಪುರದ ಬಾಗಿಲ ಮುಂದೆ ಬರುತ್ತಿರುವ ಸಮಯದಲ್ಲಿ ಬೇಗ ಬಾಗಿಲಮುಂದೆ ಬಂದು ಪತಿಯ ಮುಂದೆ ನಿಂತು

ರಾಗ—ಧನ್ಯಾಸಿ—ದೇಶಿತೋಡಿ

ಕೈಪಿಡಿದು ಕಾಯ್ದುವದೆನ್ನನೂ । ಜೀವಿತೇಶನೇ ಮುನ್ನಾ । ಪಲ್ಲ॥ ಭಾವೆ ಯಾದ ಯೆನ್ನನೀಗ । ನೋಯಿಸುವುದು ಉಚಿತವೇ ॥ ಅನುಪಲ್ಲ॥ ಕಾಮ ನೆನ್ನ ಬಾಧಿಸುವನೂ । ಕೋಮಲಾಂಗ ಯೆನ್ನೊಳು ನೀಂ । ಪ್ರೇಮದಿಂದ ಸುಖವನಿತ್ತು । ಸ್ವಾಮಿ ಯೆನ್ನ ಪೊರೆಯೋ ಬೇಗ ॥ ೧ ॥ ದ್ವಾದಶಾಬ್ದದಿಂದ ನೀನು । ಮೋದವನ್ನು ತೋರದೇ । ಬಾಧಿಸುವುದು ತರವೇ ನಿನಗಿದು । ಮೇದಿನೀಯೊಳೆಂತು ಬಾಳ್ವೆ ॥ ೨ ॥ ರಣಕೆ ನೀನು ಹೊರಟುಪೋಗೆ । ಮನವನೆಂತು ಸಹಿಸಲೀ । ಘನಕೋಪವು ಯೇತಕೆನ್ನೊಳು । ಇನಯನೇ ನೀಂ ಪಾಲಿಸೆನ್ನಾ ॥ ೩ ॥

ಪ್ರಾಣಕಾಂತನೇ ನಾನೇನು ನಿನಗೆ ಅಪರಾಧ ಮಾಡಿರುವೆನು ದಯ ವಿಟ್ಟು ಹೇಳು ವಿವಾಹವಾದಾರಭ್ಯ ಹನ್ನೊಂದು ವರ್ಷಗಳು ಕಳೆದು ಹನ್ನೆ ರಡನೇ ವರುಷ ಪ್ರಾಪ್ತವಾದರೂ ನೀನು ನನ್ನ ಮುಖವನ್ನೂ ಸಹ ನೋಡದೆ ನನಗೆ ದರ್ಶನವನ್ನೂ ಕೊಡದೆ ಹೀಗೆ ನನ್ನಮೇಲೆ ಇಷ್ಟು ನಿರ್ದಯವೇ? ನನ್ನಮೇಲೆ ನಿನಗೀ ಕೋಪವುಂಟಾಗಲು ಕಾರಣವೇನು? ಈ ಕೋಪವನ್ನು ಬಿಟ್ಟು ನನ್ನಮೇಲೆ ದಯವಿಟ್ಟು ನನಗೆ ಸುಖವಿತ್ತು ನನ್ನನ್ನು ಕಾಪಾಡು ಎಂದು ಹೇಳಲು ಅದಕ್ಕಾ ಪವನಂಜಯನು

ರಾಗ

ದೂರ ಸಾರೆ ನಾರೀ । ಮಾರಿ । ಹೆಮ್ಮಾರಿ ॥ ದೂರ ಸಾರಿ ಮಾರಿ ಪೋರಿ ॥ ಪ ॥ ಮಾನವನ್ನು ತೊರೆದು । ಹೀನತೆಯನಾಂತು । ಜ್ಞಾನವಿಲ್ಲದೆ ನೀ । ಶ್ವಾನನಂತೆ ಬೊಗಳ್ವೆ ॥ ೧ ॥ ನಿನ್ನ ವದನವನ್ನು । ಇನ್ನೆಂದಿಗೂ ನೋಡೆನು । ಕುನ್ನಿಯೇ ನೀನೀಗ । ಮುನ್ನಪೋಗು ಗೃಹಕೆ ॥ ೨ ॥ ನೀಚಳೇ ನೀನಿಂತು । ನಾಚಿಕೆಯಿಲ್ಲದೆ । ವಾಚಿಸುತ್ತಿರುವೆ । ನೀ ಚಲಿಸು ಬೇಗ ॥ ೩ ॥

ಛೀ ಛೀ ನೀಚಳೇ, ಮಾರಿಯೇ, ನಿನ್ನ ಮುಖವನ್ನು ನನಗೆ ತೋರಿಸ ಬೇಡ. ನಿನ್ನೊಳೆಂದಿಗೂ ನಾನು ಬೆರೆಯುವವನಲ್ಲ ಪಾಪಾತ್ಮಳೆ ನಾಚಿಕೆ

ಇಲ್ಲದೆ ಹೀಗೆ ನಾಯಿಯಂತೆ ಬೊಗಳುತ್ತಿರುವೆ ಸುಮ್ಮನೇ ಮನೆಗೆಹೋಗೆಂದು ಶಿಕ್ಷಿಸಲು ಆಗ ಅಂಜನೆಯು ಕಣ್ಣೀರು ಸುರಿಸುತ್ತಾ ದುಃಖದಿಂದ

ರಾಗ—ಭೈರವಿ

ನಡುನೀರೊಳು ಕೈಯ್ಯಬಿಡುವರೆ । ಕಡೆಹಾಯಿಸೋ ಹೇ ಪ್ರಾಣೇಶಾ ॥ ಪ॥ ತಡಮಾಡದೆ ಬಂದು ಎನ್ನ । ಒಡಲ ಬೇಗೆಯ ಹರಿಸೋ ಬೇಗ ॥ ಅನು ಪಲ್ಲ॥ ಸಡಗರದ ಕೊಡದೆ ಎನ್ನ । ಒಡಗೂಡದೆನ್ನ ಘಾತಿಪುದೇ । ಬಿಡು ಕೋಪವ ಇಡು ದಯವ । ಕೊಡು ಮುದವನು । ಒಡೆಯನೆ ನೀಂ ॥ ೧ ॥ ನಿನ್ನನಗಲಿ ಎಂತು ಬಾಳ್ವೆ । ಸನ್ನುತಾಂಗ ಎನ್ನ ತೊರೆದೆ । ಇನ್ನು ಜೀವಿಸ ಲಾರೆ ಧರೆಯೋಳ್ । ಮುನ್ನ ನೀನು ಬೇಗ ಕಾಯೊ ॥ ೨ ॥

ಪ್ರಾಣಕಾಂತನೇ ನೀನು ನನ್ನ ಕೋರಿಕೆಯನ್ನು ಪಾಲಿಸದಿದ್ದರೆನಾನಿನ್ನು ಈ ಭೂಮಿಯಲ್ಲಿ ಜೀವಿಸಿ ಫಲವೇನು ? ನನಗೆ ಪ್ರಾಣತ್ಯಾಗವೇ ಗತಿಯೆಂದು ದುಃಖಿಸುತ್ತಿರಲು ಆಗ ವಾಯುಕುಮಾರನು ಅತಿ ಕೋಪಾವಿಷ್ಟನಾಗಿ ನೀಚಳೆ, ಭ್ರಷ್ಟಳೆ, ದುರುಳೆ ದೂರ ಹೋಗು. ಯುದ್ಧಕ್ಕೆ ಹೋಗುವ ಕಾಲದಲ್ಲಿ ನಾಯಿಯಂತೆ ಬೊಗಳುತ್ತಿರುವೆಯಾ. ಮಾನವೂ ನಾಚಿಕೆಯೂ ಇಲ್ಲದೆ ರಕ್ಕಸಿಯಂತೆ ಅರಚುವೆ ನಿನ್ನ ಮುಖವನ್ನು ನೋಡಲಾರೆನು ಛೀ ಛೀ ನೀಚಳೆ ಬೇಗ ಅರಮನೆಗೆ ಹೋಗು ಎಂದು ಅವಳನ್ನು ತಿರಸ್ಕರಿಸಿ, ತನ್ನ ದಾರಿ ಯನ್ನು ಹಿಡಿದು ಯುದ್ಧಕ್ಕೆ ಹೊರಟುಹೋಗಲು ಇತ್ತ ಅಂಜನಾದೇವಿಯು ಬಹು ದುಃಖದಿಂದ

ರಾಗ—ಮುಖಾರಿ— ಆದಿತಾಳ

ತೊರೆದು ಪೋದೆಯಾ ಎನ್ನ । ವರಪ್ರಾಣಕಾಂತನೇ ॥ ಪಲ್ಲ॥ ಉರುತರ ಕೋಪದೀ ತರುಣಿಯೊಳಗೆ ನೀನು । ಕರುಣವನಿರಿಸದೆ । ಧುರಕೆ ಪೋಗು ವರೇ ॥ ೧ ॥ ಹಿಂದೆ ಮಾಡಿದ ಪಾಪ । ಬಂಧವಾಗಿರೆ ನಾನು । ಇಂದು ಸಂಕಟದೊಳಗೆ । ನೊಂದು ಕುಂದಿರುವೆನೊ ॥ ೨ ॥ ಭಾವಜವಿಜಯನೇ । ಪಾವನಮೂರ್ತಿಯೇ । ದೇವರದೇವ ಎನ್ನಾ । ಕಾಯ್ವುದು ಕೃಪೆಯಿಂದಾ ॥

ಹಾ ಪ್ರಿಯನೇ ಕೊನೆಗೂ ನನ್ನನ್ನು ತೊರೆದು ಈ ದುಃಖಸಂಕಟಗಳಿಗೆ ಗುರಿಮಾಡಿ ಹೊರಟುಹೋದೆಯಾ ನನಗೆ ಮುಂದೇನು ಗತಿ ? ಅಕಟಾ ಇನ್ನು ಹ್ಯಾಗೆ ಜೀವಿಸಲಿ ಎಂದು ಮೂರ್ಛಿತಳಾಗಲು ಸಖಿಯರು ಶೈತ್ಯೋಪ

ಚಾರ ಮಾಡಲು ಅಂಜನೆಯು ಮೂರ್ಛೆಯಿಂದ ಎಚ್ಚತ್ತು ಸಖಿಯರೇ ಆರ್ಯ ಪುತ್ರನ ಪಾದಗಳಿಗೆರಗಿ ಎಷ್ಟು ವಿಧವಾಗಿ ಪ್ರಾರ್ಥಿಸಿಕೊಂಡಾಗ್ಯೂ ನನ್ನನ್ನು ತಿರಸ್ಕರಿಸಿ ನಿಲ್ಲದೆ ಹೊರಟುಹೋದನು ಈ ಜನ್ಮವು ಅಸಾರ್ಥಕವು ಎಂದು ಸಖಿಯೊಡನೆ ಹೇಳಲು ಸಖಿಯಾದ ವಸಂತಮಾಲೆಯು ಅಮ್ಮಾ ಅಂಜನೆ ! ಚಿಂತಿಸಬೇಡ ಬಾ ಅಂತಃಪುರಕ್ಕೆ ಹೋಗೋಣವೆಂದು ಅವಳನ್ನು ಕರೆದು ಕೊಂಡು ಬರುವಾಗ ರಾಣಿಯೇ ಇಗೋ ನೋಡು ಪೂರ್ಣಕಲಶಧಾರಿಣಿಯ ರಾದ ಸುಮಂಗಲೆಯರು ನಮ್ಮ ಎದುರಾಗಿ ಬರುತ್ತಿರುವುದರಿಂದ ಇದು ಶುಭ ಸೂಚಕವೇ ಸರಿ ಈ ಶುಭಶಕುನಗಳಿಂದ ಈ ರಾತ್ರಿಯಲ್ಲಿ ಕಾರಣಾಂತರದಿಂದ ನಿನ್ನನ್ನು ಸ್ಮರಿಸಿ ನಿನ್ನ ಕಾಂತನು ನಿಜವಾಗಿಯೂ ಬರುತ್ತಾನೆ ಸಂಶಯವಿಲ್ಲ, ಇನ್ನು ನೀನು ಚಿಂತೆಯನ್ನು ಬಿಡು ಎಂದು ಸಖಿ ಹೇಳಲು, ಸಖಿಯೆ ಈ ನುಡಿಯು ದುಃಖೋಪಶಮನವಾದುದಲ್ಲವೇ ಎಂದು ಅಂಜನೆಯು ಹೇಳಲು, ಅಮ್ಮಾ ಅಂಜನಾ ನನ್ನ ಮಾತಿನಲ್ಲಿ ಸಂಶಯವನ್ನು ಬಿಡು, ಈ ರಾತ್ರಿಯೇ ಗೊತ್ತಾಗುವುದು ಎನಲು ಅಂಜನೆಯು ಸಖಿಯೇ ನಿನ್ನ ವಚನವು ಸಫಲವಾ ದರೆ ನಾನೇ ಧನ್ಯಳು ಎಂದು ಹೇಳಿ, ಅಂತಃಪುರಕ್ಕೆ ಬಂದಿರಲು ಇತ್ತ ವಾಯು ಕುಮಾರನು ತನ್ನ ಮಿತ್ರ, ಸೇನಾಧಿಪತಿ, ಸೈನ್ಯ, ಪರಿವಾರದೊಂದಿಗೆ ಬರುತ್ತಾ ಕೆಲವು ದೂರ ಬಂದನಂತರ ಸಾಯಂಕಾಲವಾಯಿತು ಆ ವನದಲ್ಲಿ ತನ್ನ ಪರಿವಾರವನ್ನು ಬೀಡಿಕೆ ಬಿಟ್ಟು ಅಲ್ಲಿಯೇ ಸಾಯಂಕಾಲವಾದ್ದರಿಂದ ಸಂಧ್ಯಾ ವಂದನಾದಿ ಕರ್ಮಗಳನ್ನು ಅಲ್ಲಿದ್ದ ಸರೋವರದಲ್ಲಿ ಮುಗಿಸಿಕೊಂಡು ತನ್ನ ಮಿತ್ರನಾದ ಪ್ರಹಸಿತನೊಡನೆ ವಿಶ್ರಮಿಸಿಕೊಳ್ಳುತ್ತಿರುವ ಸಮಯದಲ್ಲಿ ಚಕ್ರ ವಾಕ ಪಕ್ಷಿಯು ಬಂದು ಅಲ್ಲಿದ್ದ ವೃಕ್ಷದಲ್ಲಿ ನೋಡಿ ತನ್ನ ಗಂಡುಪಕ್ಷಿಯು ಬಾರದೆ ಇರೋಣ ಆ ಹೆಣ್ಣು ಚಕ್ರವಾಕ ಪಕ್ಷಿಯು ವ್ಯಸನದಿಂದ ತನ್ನ ಕಾಂತನು ಬರಲಿಲ್ಲವೆಂದು ಆ ವನದಲ್ಲಿ ಎಲ್ಲಾ ವೃಕ್ಷಗಳನ್ನು ಹುಡುಕುತ್ತಾ ತನ್ನ ಧ್ವನಿಮಾಡುತ್ತಾ ಮತ್ತು ಪುನಃ ತಾನು ವಾಸಮಾಡುತ್ತಿದ್ದ ವೃಕ್ಷದ ಬಳಿ ಬಂದು ಹುಡುಕಿ ಕೂಗುತ್ತಾ ಆ ಕೊಳದಲ್ಲಿ ತನ್ನ ನೆರಳನ್ನು ನೋಡಿ ತನ್ನ ಗಂಡುಪಕ್ಷಿಯು ಬಂದಿರುವುದೆಂಬ ಭ್ರಾಂತಿಯಿಂದ ಆ ಸರೋವರದಲ್ಲಿಮುಳುಗಿ ನೋಡುತ್ತಾ ಹೀಗೆ ತಾನು ಚಿಂತೆಯಿಂದ ಆ ವನದಲ್ಲಿ ಎಲ್ಲಾ ಕಡೆಗಳಲ್ಲಿಯೂ ಕೂಗುತ್ತಾ ಹುಡುಕುತ್ತಿರುವ ಆ ಚಕ್ರವಾಕ ಪಕ್ಷಿಯನ್ನು ಕಂಡು ಪವನಂಜ

ಏನು ಮಿತ್ರನೇ ಇದೇನು ? ಆ ಚಕ್ರವಾಕ ಪಕ್ಷಿಯು ಈ ವನದಲ್ಲೆಲ್ಲಾ ಕೂಗಿಕೊಳ್ಳುತ್ತಾ ಅಲೆಯುತ್ತಾ ಹುಡುಕುತ್ತಿರಲು ಕಾರಣವೇನು ತಿಳಿಸು ಎನಲು ಆಗ ಆ ಮಿತ್ರನಾದ ಪ್ರಹಸಿತನು ಪವನಂಜಯನನ್ನು ಕುರಿತು ಅಯ್ಯಾ ಮಿತ್ರನೇ ಕೇಳು ಇದು ಹೆಣ್ಣು ಚಕ್ರವಾಕ ಪಕ್ಷಿಯು ತನ್ನ ಗಂಡು ಪಕ್ಷಿಯು ಇಷ್ಟುಹೊತ್ತಾದರೂ ಬಂದಿಲ್ಲವಾದ ಕಾರಣ ಈ ವನದಲ್ಲೆಲ್ಲಾ ಕೂಗಿಕೊಂಡು ಅಲೆಯುತ್ತಾ ತನ್ನ ಗಂಡನನ್ನು ಹುಡುಕುತ್ತಾ ಇದೆ ಈ ಸರೋವರದ ನೀರಿನೊಳಗೆ ತನ್ನ ಪ್ರತಿಬಿಂಬವನ್ನು ನೋಡಿ ತನ್ನ ಗಂಡ ಬಂದಿರುವನೆಂಬ ಭ್ರಾಂತಿಯಿಂದ ಆ ಸರೋವರದೊಳಗೆ ಬಿದ್ದು ತಾನು ಹುಡುಕುತ್ತಿದೆ. ಮಿತ್ರ ಅಗೋ ನೋಡು ಈಗತಾನೆ ಗಂಡು ಚಕ್ರವಾಕ ಪಕ್ಷಿಯು ಬರಲು ಈಗ ಆ ಹೆಣ್ಣು ಪಕ್ಷಿಯು ಬಹು ಸಂತೋಷದಿಂದ ತನ್ನ ಗಂಡನೊಡನೆ ತಮ್ಮ ಗೂಡಿನೊಳು ಸೇರಿರುತ್ತವೆ ಎಂದು ಹೇಳಲು ಆಗ ವಾಯುಕುಮಾರನು ಇದನ್ನೆಲ್ಲಾ ನೋಡಿದವನಾಗಿ ಮಿತ್ರನಿಂದ ಕೇಳಿ ತಿಳಿದುಕೊಂಡವನಾಗಿ ತನ್ನ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಈ ಪಶುಪಕ್ಷಿಗಳಲ್ಲಿಯೂ ಕೂಡ ದಾಂಪತ್ಯ ಪ್ರೀತಿಯು ಇಷ್ಟು ಅತಿಶಯವಾಗಿರುವಾಗ ಪಾಪಿಯಾದ ನಾನು ನನ್ನ ಪ್ರಾಣಕಾಂತೆಯನ್ನು ನಾನು ಇಲ್ಲಿಗೆ ಹೊರಟುಬರುವ ಸಮಯದಲ್ಲಿಯೂ ಅವಳನ್ನು ಜರಿದು ತಿರಸ್ಕರಿಸಿ ಅವಳನ್ನು ಅತಿ ಘೋರ ಸಂಕಟಕ್ಕೆ ಗುರಿಮಾಡಿದೆನು ಅಲ್ಲದೆ ವಿವಾಹವಾದಾರಭ್ಯ ಹನ್ನೆರಡು ವರ್ಷಗಳಾದರೂ ಅವಳ ಮುಖವನ್ನು ಸಹ ನೋಡದೆ ಅವಳನ್ನು ಉರುತರವಾದ ದುಃಖಕ್ಕೆ ಗುರಿಮಾಡಿರುವೆನಲ್ಲಾ

ರಾಗ

ಕರುಣಿಸಿ ಕೇಳೋ ಮಿತ್ರ । ನಿರುಪಮ ಚರಿತ ॥ ಪಲ್ಲ ॥ ತರುಣಿಯಂಜನೆಯೊಳು । ಕರುಣವನಿರಿಸದೆ । ಉರುತರ ಬಾಧೆಗೆ ಗುರಿಮಾಡಿದೆನು ನಾನು॥ ಸತಿಯೊಳು ಬೆರೆಯುವ । ಮತಿಯನ್ನರುಹು ಬೇಗ । ಹಿತವ ತೊರೆದುಬಂದೆ। ಕ್ಷಿತಿಯೊಳೀಂ ಪಾಪಿಯು ॥ ೨ ॥ ಮಾರನ ಬಾಧೆಯ ಸೈರಿಸಲಾರೆನು । ನಾರಿಯ ಸೇರುವ । ದಾರಿಯ ತೋರಿಸೋ ॥ ೩ ॥

ಮಿತ್ರನೇ ಈ ತಿರ್ಯಂಚ ಪ್ರಾಣಿಯಾದ ಹೆಣ್ಣು ಚಕ್ರವಾಕ ಪಕ್ಷಿಯು ನನ್ನ ಕಾಂತೆಯಲ್ಲಿ ಪ್ರೀತಿಸೆಂದು ನನಗೆ ಬುದ್ಧಿಯನ್ನು ಕಲಿಸಿತು ಹನ್ನೆರಡು

ವರುಷಗಳಿಂದಲೂ ಪತಿವಿರಹದಿಂದ ಸಂಕಟಪಡುತ್ತಿರುವ ನನ್ನ ಪ್ರಾಣಕಾಂತೆಗೆ ಎಷ್ಟು ಅಪರಾಧವನ್ನು ಮಾಡಿದೆನು

ಕಂದ—ರಾಗ—ಶಂಕರಾಭರಣ

ವಲ್ಲಭನೊಳಗಿಹ ವಧುವಿಗೆ । ಖುಲ್ಲೆನಿಸಿಹ ನರಕಭೂಮಿಯೂ ಸಗ್ಗನಿಸಪಂ ।
ಸಲ್ಲಸುಳಿದವಳ್ಗೆ ನಾಕದ । ಸಲ್ಲಲಿತಾಶೇಷಸುಖವು ನಾರಕದುಃಖಂ ॥

ಗಂಡನೊಂದಿಗೆ ಸುಖದಿಂದಿರುವ ಸ್ತ್ರೀಗೆ ನರಕಭೂಮಿಯಾದಾಗ್ಯೂ ಸ್ವರ್ಗಕ್ಕೆ ಸಮವಾದದ್ದು ಗಂಡನ ಸುಖವನ್ನು ಕಾಣದಿರುವ ಸ್ತ್ರೀಗೆ ಸ್ವರ್ಗ ಲೋಕವಾದಾಗ್ಯೂ ಅದು ನರಕವೇ ಆದುದರಿಂದ ಪ್ರಾಣಕಾಂತೆಯಾದ ಅಂಜನಾ ನನ್ನ ಅಪರಾಧವನ್ನು ಕ್ಷಮಿಸು ಪ್ರಸನ್ನಳಾಗು ನನ್ನ ಹೃದಯದಲ್ಲಿ ನಿನ್ನ ರೂಪವನ್ನು ಧ್ಯಾನಿಸುತ್ತಿದ್ದೇನೆ ಮಿತ್ರನೇ ಕಾಂತೆಯನ್ನು ಸೇರುವ ಬಗೆ ಹೇಗೆ ? ನಾನು ಈ ಸಂತಾಪವನ್ನು ಹೇಗೆ ಸಹಿಸಲಿ ?

ರಾಗ—ತೋಡಿ--ಆದಿತಾಳ—ಚಾವು ಬಾವನನರಿಯದೇ

ಕಾಂತೆಯು ಕಂತು ಸಂತಾಪದಿ ಚಿಂತಿಸಿ | ಕಾಂತನ ಕಾಣದೆಂತಿಹಳೋ ॥
॥ ಪಲ್ಲ ॥ ಮೊದಲೆನ್ನ ಸಖಿಯರಿಂ । ರುದಿತಮಡಿಗೆ ಪತೀ । ಗುದಿಸಿತು ಖತಿ
ಯೆಂದು ರೋಧಿಪಳೋ ॥ ೧ ॥ ಮಾರನು ಎನ್ನಂಗವ । ಸೂರೆಗೈದನುಎಂದು
ಹಾರಲಂಕಾರವರಮದೂರುವಳೋ ॥ ೨ ॥ ತಾಳದೆ ವಿರಹದೋಳ್ । ಆಳಿ
ಯರ್ಗೊಳಿಗವ । ಪೇಳದೆ ಮೌನದೋಳ್ । ಕೂಳತೊರೆದಿಹಳೋ ॥ ೩ ॥

ಹಾ ಪಾಣಪ್ರಿಯೆ ನಿನ್ನನ್ನಗಲಿ ಹೇಗೆ ಜೀವಿಸಲಿ ?

ರಾಗ—ತೋಡಿ

ಮುನ್ನಾವದೋಷಮಿಲ್ಲದೆ । ನನ್ನುತ ಗುಣಮಣಿ ಕರಂಡಿಕೆಯ ಸಾಧ್ವಿಯ
ನಾಂ ॥ ಪನ್ನೆರಡಬ್ದದಿ ತೊರೆದಿಹ| ಉನ್ನತಳಲ್ ಅವಭವಕೆ ಕಿಡುಗುಂಜಿನ
ಜಿನಾ ॥

ನನ್ನಂಥ ಪಾಪಿಯು ಈ ಜಗತ್ತಿನಲ್ಲಿಲ್ಲ ನಿಷ್ಕಾರಣವಾಗಿ ಆಕೆಗೆ ದುಃಖ ವನ್ನುಂಟುಮಾಡಿದುದರಿಂದ ವಿರಹಾಗ್ನಿ ಜ್ವಾಲೆಯಿಂದ ಪ್ರಪಂಚ ವ್ಯಾಪಾರ ವನ್ನೇ ಬಿಟ್ಟಿರಬಹುದು ಎಂದು ಪ್ರಲಾಪಿಸುತ್ತಾ ಇರುವ ವಾಯುಕುಮಾರ ನನ್ನು ಕುರಿತು ಎಲೈ ಮಿತ್ರ ರಾಜೇಂದ್ರ, ಪತಿವ್ರತಾ ಶಿರೋಮಣಿಯನ್ನು ನೇರದೆ ಹನ್ನೆರಡು ವರ್ಷಗಳಿಂದ ತೊರೆದು ಬಹು ಸಂಕಟಕ್ಕೆ ಗುರಿಮಾಡಿರುವ

ಪಾತಕವು ನಿನಗೆ ತಪ್ಪಿದ್ದಲ್ಲ ಎನಲು ಪವನಂಜಯನು ಮಿತ್ರನೇ ಈ ದಿನ ಹಗಲು ನನ್ನ ಕಾಂತೆಯು ನನ್ನ ಪಾದಗಳಮೇಲೆ ಬಿದ್ದು ಎಷ್ಟು ಬೇಡಿಕೊಂಡರೂ ಧಿಕ್ಕರಿಸಿ ಬಂದೆನು ನಾನು ಎಂಥಾ ಅಪರಾಧವನ್ನು ಮಾಡಿದೆನು ಮಿತ್ರನೇ ಪರಮಮಿತ್ರರಿಂದ ಸಮಸ್ತ ವಿಪತ್ತು ಪರಿಹಾರವಾಗುತ್ತೆಂದು ಶಾಸ್ತ್ರವು ಘಂಟಾ ಘೋಷವಾಗಿರುತ್ತದೆಯಾದ ಕಾರಣ ನನ್ನ ಮನೋಭೀಷ್ಟಕ್ಕೆ ಅನುಕೂಲ ವನ್ನು ಮಾಡಬೇಕಾಗಿ ವಿಧೇಯನಾಗಿ ಬೇಡುತ್ತೇನೆಂದು ಹೇಳಲು ಆಗ ಪ್ರಹ ಸಿತನು ತನ್ನ ಮನಸ್ಸಿನಲ್ಲಿ ಯೋಚಿಸಿದಂತೆ ಈಗ ಅನುಕೂಲವಾಯಿತೆಂದು ಅಂತರಂಗದಲ್ಲಿ ಯೋಚಿಸಿ ಮಿತ್ರನೇ ನೀನು ವರುಣನ ಸಮರಕ್ಕೆ ಹೋಗುವ ರಣಧೀರನೋ ಕಾಮುಕನೋ ಇಲ್ಲವೇ ಅವಿವೇಕ ಶಿಖಾಮಣಿಯೋ ? ಅರಸು ಗಳು ಎಮ್ಮೆಯ ಹಾಲನ್ನು ಕುಡಿಯುವ ಮದೋನ್ಮತ್ತರೆಂದು ಹೇಳುವುದು ನಿಜ. ರಾಜೇಂದ್ರನೇ ನೀನು ಆಸ್ಥಾನದಲ್ಲಿ ಆಡಿದುದೇನು, ಈಗ ನೀನಾಡುವ ಮಾತುಗಳೇನು ? ಮೊದಲು ನಿನ್ನ ತಂದೆಯ ಮುಂದೆ ಆಡಿದ ಮಾತನ್ನು ನಡೆಸು, ಬಳಿಕ ಯೋಚಿಸೋಣ ಎಂದು ಹೇಳಲು ಪವನಂಜಯನು ಮಿತ್ರನೇ ಯುದ್ಧಕ್ಕೆ ಹೋಗುವುದೇನೋ ನಿಜವು ನಾಳೆಯೇ ಹೊರಡುತ್ತೇನೆ ಈಗ ನನ್ನ ಪ್ರಾಣಪ್ರಿಯೆಯನ್ನು ಕಾಣಲಿಕ್ಕೆ ಒಂದು ತಂತ್ರವನ್ನು ಹೇಳು ತಾಮಸ ಮಾಡಿದರೆ ವಿರಹತಾಪದಿಂದ ತಾಳಲಾರೆನು ಇದಕ್ಕೇನು ಮಾಡುವುದು, ಬೇಗ ಹೇಳು ಎನಲು ಆಗ ಪ್ರಹಸಿತನು ಮುಗುಳ್ನಗೆಯಿಂದ ರಾಜೇಂದ್ರನೆ ನೀನು ನಿನ್ನ ಸೇನಾಧಿಪತಿಯನ್ನು ಕರೆಯಿಸಿ ಮೇರುಪರ್ವತದ ಭದ್ರಸಾಲವನದಲ್ಲಿರುವ ಚೈತ್ಯಾಲಯಗಳ ದರ್ಶನಮಾಡಿ ನಾವು ಬರುವವರಗೂ ಸೇನೆಯ ಪರಿವಾರ ವನ್ನು ಜಾಗರೂಕತೆಯಿಂದ ಕಾಯ್ದುಕೊಂಡಿರಬೇಕೆಂದು ತಿಳಿಸಿ, ನಾವು ಪಟ್ಟ ಣಕ್ಕೆ ಹೊರಡೋಣ ಎನಲು ಆಗ ಪವನಂಜಯನು ಸಂತೋಷಚಿತ್ತನಾಗಿ ಶಹಬಾಸ್ ಮಿತ್ರನೇ ನಿನ್ನಂಥ ಸನ್ಮಿತ್ರನಿರುವಲ್ಲಿ ಯಾವ ಕಷ್ಟಗಳು ಬಂದಾಗ್ಯೂ ಪರಿಹಾರವಾಗಿ ಎಂತಹ ಮಹತ್ಕಾರ್ಯವು ಸಿದ್ಧಿಸುವುದು ಸತ್ಯವು ಎಂದು ಹೇಳಿ ಚಾರನಿಂದ ಸೇನಾಧಿಪತಿಯನ್ನು ಕರಯಿಸಿ ನಾವು ಬರುವವರೆಗೂ ನೀನು ಸೈನ್ಯವನ್ನು ಎಚ್ಚರದಿಂದ ಕಾಯ್ದುಕೊಂಡಿರಬೇಕೆಂದು ಹೇಳಿ ತನ್ನ ಗಗನ ಗಾಮಿನೀ ವಿದ್ಯಾಬಲದಿಂದ ಆಕಾಶಮಾರ್ಗದಲ್ಲಿ ತನ್ನ ಸಖನಾದ ಪ್ರಹಸಿತ ನೊಡನೆ ವಿಮಾನಾರೂಢನಾಗಿ ತಮ್ಮ ಪಟ್ಟಣಕ್ಕೆ ಹಿಂತಿರುಗಿ ಬಂದು ಅಂತಃ

ಪುರಕ್ಕೆ ಪ್ರವೇಶ ಮಾಡಿ ಸಖನನ್ನು ಕುರಿತು ಮಿತ್ರನೇ ರತ್ನಖಚಿತವಾದಮಂಚ ದಲ್ಲಿ ನವರತ್ನಖಚಿತವಾದ ಆಭರಣಗಳನ್ನೆಲ್ಲಾ ತ್ಯಜಿಸಿ ಸಹಜಸೌಂದರಿಯಾಗಿ ಮೃದುಹಂಸತೂಲಿಕಾತಲ್ಪಗಲ್ಲಿ ನಿದ್ರೆಯಿಂದ ರಾಜಿಸುವವಳು ನನ್ನ ಮನೋ ರಮೆಯಲ್ಲವೇ? ಸಂಶಯವೇನು, ನಾನು ಬಂದಿರುವುದನ್ನು ಆಪ್ತಸಖಿಯಾದ ವಸಂತಮಾಲಿನಿಯೊಡನೆ ತಿಳಿಸು ನಾನು ಸ್ವಲ್ಪ ದೂರದಲ್ಲಿ ನಿಲ್ಲುವೆನು ಎನಲು ಪ್ರಹಸಿತನು ಸಖಿಯಾದ ವಸಂತಮಾಲೆಯನ್ನು ಎಚ್ಚರಗೊಳಿಸಿ ಸಖಿಯೇ, ವಸಂತಮಾಲೆಯೇ, ನಮ್ಮ ಮಹಾರಾಜನು ದಯಮಾಡಿರುವು ದನ್ನು ರಾಣಿಗೆ ತಿಳಿಸು ಎನಲು ಆಗ ವಸಂತಮಾಲೆಯು ಎಚ್ಚತ್ತು ಗಾಬರಿ ಯಿಂದೆದ್ದು ಇದೇನೀಆಶ್ಚರ್ಯವು. ಈ ಅಂತಃಪುರದಲ್ಲಿ ಎಂದೂ ನಡೆಯದ ಕೃತ್ಯವು? ಈ ನಿಶಿಯ ಸಮಯದಲ್ಲಿ ಯಾರು ಬಂದಿರುವರು ಎಂದು ಕೇಳಲು ಆಗ ನಾನು ಪ್ರಹಸಿತನು ನನ್ನ ಮಿತ್ರನಾದ ವಾಯುಕುಮಾರನು ಬಂದಿರು ವನು ಎಂದು ರಾಣಿಗೆ ತಿಳಿಸು, ನೀನು ಇಷ್ಟು ಕಳವಳಗೊಳ್ಳುವುದೇಕೆ? ಇಗೋ ನೋಡು ನಮ್ಮ ಮಹಾರಾಜನು ಬಂದಿರುವನು ಎಂದು ಸಖಿಗೆ ತೋರಿ ಸಲು ಆಗ ಆ ಸಖಿಯು ವಾಯುಕುಮಾರನನ್ನು ನೋಡಿದವಳಾಗಿ ಸಂತೋಷ ಪಟ್ಟು ಅಂಜನೆಯ ಮಂಚದ ಸಮೀಪಕ್ಕೆ ಬಂದು ಅಮ್ಮಾ ರಾಣಿಯೇ! ನಾನು ನಿನ್ನ ಕಾಂತನು ಈ ರಾತ್ರಿಯೇ ಬರುತ್ತಾನೆಂದು ಹೇಳಿದುದು ಸಫಲ ವಾಯಿತು. ಇಗೋ ನೋಡು ಏಳು ಏಳು ಎಂದು ಎಚ್ಚರಗೊಳಿಸಲು ಆಗ ಅಂಜನೆಯು ಗಾಬರಿಯಿಂದೆದ್ದು ಸಖಿ ವಸಂತಮಾಲಾ ಇದೇನು ಆಶ್ಚರ್ಯ ಆರ್ಯಪುತ್ರನು ಇಲ್ಲಿಗೆ ಬಂದನೆಂದು ಸ್ವಪ್ನವಾಯಿತಲ್ಲಾ ಎನಲು ಸಖಿಯು ತಾಯಿಯೆ ಇದು ಕನಸಲ್ಲ ನಿಜವಾಗಿಯೂ ನಿನ್ನ ಕಾಂತನು ಬಂದಿರುವನು ಇಗೋ ನೋಡು ನಿನ್ನ ಕಾಂತನೂ ಮಿತ್ರ ಪ್ರಹಸಿತನೂ ಬಂದಿರುವರು ಎನಲು ಆಗ ಅಂಜನೆಯು ಪ್ರಹಸಿತನನ್ನು ನೋಡಿ, ಅಯ್ಯಾ ಪ್ರಹಸಿತನೇ ಈ ದಿನದ ಹಗಲಿನಲ್ಲಿ ನಾನು ಪಾದಗಳ ಮೇಲೆ ಬಿದ್ದು ಎಷ್ಟು ವಿಧವಾಗಿ ಬೇಡಿಕೊಂಡರೂ ಕರುಣವಿಡದೆ ಧಿಕ್ಕರಿಸಿ ಹೋಗಿರುವ ಕಾಂತನು ಈಗ ಬಂದಿ ರುವುದು ಮಹದಾಶ್ಚರ್ಯ ನಾನು ಪಾಪಿಯು ನನ್ನ ಕಷ್ಟವನ್ನು ಎಷ್ಟು ಹೇಳಿ ದರೂ ಸ್ವಲ್ಪವೇ ಎಂದು ಕಣ್ಣೀರು ಸುರಿಸುತ್ತಾ ಇರಲು ಆಗ ಪ್ರಹಸಿತನು ತಾಯಿಯೇ ಚಿಂತೆಯನ್ನು ಬಿಡು, ನೀನು ಹೇಳಿದುದು ನಿಜ ಆದರೆ ನಾವು

ಬೀಡು ಬಿಟ್ಟಿದ್ದ ವನದಲ್ಲಿ ಚಕ್ರವಾಕ ಎಂಬ ಹೆಣ್ಣು ಪಕ್ಷಿಯು ತನ್ನ ಗಂಡು ಪಕ್ಷಿಯು ತನ್ನ ಗೂಡಿಗೆ ಬರಲು ಸಾವಕಾಶವಾದ್ದರಿಂದ ಆ ಹೆಣ್ಣು ಪಕ್ಷಿಯು ತನ್ನ ಗಂಡ ಬರುವ ವರಗೂ ಕೂಗುತ್ತಾ ಅಲೆಯುತ್ತಾ ಇದ್ದು ತನ್ನ ಗಂಡ ಬಂದ ನಂತರ ಅತಿ ಸಂತೋಷದಿಂದ ತನ್ನ ಗೂಡಿಗೆ ಪ್ರವೇಶ ಮಾಡಿದ್ದನ್ನು ನಮ್ಮ ಮಹಾರಾಜನು ನೋಡಿ ಇದರಿಂದ ತಾನು ಬುದ್ಧಿಕಲಿತವನಾಗಿ ತಾನು ಮಾಡಿದ ಅಪರಾಧವನ್ನು ನೆನೆದು ಚಿಂತಿಸಿ ನಿನ್ನ ಮೇಲಣ ವ್ಯಾಮೋಹ ದಿಂದ ಈಗ ಇಲ್ಲಿಗೆ ಬಂದಿರುವನು ಇಗೋ ನೋಡು ಎಂದು ತೋರಿಸಲು ಆಗ ವಸಂತಮಾಲೆಯು ರಾಜನ ಸಮೀಪಕ್ಕೆ ಬಂದು ಮಹಾರಾಜನೇ ಒಳಕ್ಕೆ ದಯಮಾಡಿಸಬೇಕೆನಲು ಆಗ ವಾಯುಕುಮಾರನು ಒಳಕ್ಕೆ ಪ್ರವೇಶ ಮಾಡಲು ಅಂಜನೆಯು ಪಾದಗಳಿಗೆರಗಿ ನಿಂತಿರುವಾಗ ವಾಯ ಕುಮಾರನು—

ಕಂದ

ಚಂದಳಿರಂದವಪ್ಪೊಂದಿದ । ಚೆಂದುಟಿ ಮಧುರಸವ ಪೀರಿ ಮಹದಾಲಿಂಗಿಸಿ॥
ಕುಂದರದೆ ಕಾಮಕೇಳಿಯಾ। ನಂದಾಂಬುಧಿ ಮಗ್ನನಾಗದಿರೆ ನಾನುಗುಮೇ॥

ರಾಗ—ಝಂಜೂಟಿ

ಬಾರೆ ಸುಂದರೀ । ಬಾರೆ ಅರಗಿಣಿ । ಬಾರೆ ಮೋಹಿನಿ ॥ ಬಾರೆ ನೀರೆ । ಸರಸಿ ಜಾಕ್ಷಿ । ಬಾರೆ ವೈಯ್ಯಾರಿ ॥ ಪಲ್ಲ ॥ ಸಾರಸಾಕ್ಷಿ ಕೀರವಾಣಿ । ಪಂಕಜಾನನೆಯೇ ॥ ಸಾರಸೌಭಾಗ್ಯವನ್ನು ಹೊಂದುವೆ । ಬಾರೆ ಗಂಭೀರೆ ॥ ೧ ॥ ನೇರಿ ಎನ್ನ ಸಾರಸೌಖ್ಯವನ್ನು ಬೀರುತೆ ॥ ಮಾರನರಗಿಣಿ । ಮೋಹನಮಂಜರಿ । ಬಾರೆ ಕೋಮಲೆಯೇ ॥ ೨ ॥

ಪ್ರಿಯೆ ಅಂಜನೆ ನಿನ್ನನ್ನು ಹನ್ನೆರಡು ವರುಷಗಳಿಂದಲೂ ತೊರೆದು ನಿನ್ನ ಮುಖವನ್ನು ಸಹ ನೋಡದೆ ತುಂಬಾ ಸಂಕಟಕ್ಕೆ ನಿನ್ನನ್ನು ಗುರಿಮಾಡಿರುವ ಈ ಪಾಪಿಯಾದ ನನ್ನ ಅಪರಾಧವನ್ನು ಕ್ಷಮಿಸಿ ಪ್ರಸನ್ನಳಾಗು ಎನಲು ಆಗ ಅಂಜನೆಯು ಪತಿಯನ್ನು ಕುರಿತು, ಪ್ರಾಣಕಾಂತನೇ ಹನ್ನೆರಡು ವರುಷ ಗಳಿಂದಲೂ ನಿರಪರಾಧಳಾದ ನನ್ನನ್ನು ತೊರೆದು ಈ ದಿನ ಬೆಳಗಿನಲ್ಲಿ ನಿನ್ನನ್ನು ಎಷ್ಟು ಬೇಡಿಕೊಂಡರೂ ಧಿಕ್ಕರಿಸಿ ಹೊರಟುಹೋಗಿ ಈಗ ಈ ನಿಶಿ ಸಮಯ ದಲ್ಲಿ ಇಲ್ಲಿಗೆ ನೀನು ಬಂದು ಈ ರೀತಿ ವರ್ತಿಸುವುದು ಉಚಿತವಲ್ಲ

ರಾಗ

ಬೇಡ ಬೇಡ ಪ್ರಾಣಕಾಂತ। ಬೇಡಿಕೊಂಬೆನೂ ನಿನ್ನ। ನಾಡಜನರು ಕಾಣು ವಂತೆ। ಗೂಡಿ ಪೋಗೆರಣಕೆಂದು ॥೧॥ ಮಧ್ಯೆ ರಾತ್ರಿಯೊಳು ನೀನು। ಸದ್ದು ಮಾಡದೆ ಮರಳಿ। ಕದ್ದು ಬಂದು ಎನ್ನನೀಗ। ಮುದ್ದಿಸುವುದು ನ್ಯಾಯವೇ ॥೨॥ ಋತುಕಾಲಒದಗಿರೆ। ರತಿಕ್ರೀಡೆಯನಾಡೆ। ಗತಿಯೇನು ಮುಂದೆ ನನಗೆ। ಪತಿಯೇ ನೀನು ಮನ್ನಿಸು ॥೩॥

ಪ್ರಾಣಕಾಂತನೇ ಪುರದ ಜನರೆಲ್ಲರೂ ಕಾಣುವಂತೆ ನನ್ನನ್ನು ತಿರಸ್ಕರಿಸಿ ಹೋಗಿ ಈ ನಿಶಿ ಸಮಯದಲ್ಲಿ ಬಂದು ಸುಖವನ್ನಪೇಕ್ಷಿಸುವುದು ನ್ಯಾಯವಲ್ಲವೆ ನಲು ಆಗ ಪವನಂಜಯನು

ಕಂದ—ರಾಗ

ರಮಣಿಯೆ ಎನ್ನಪರಾಧವ। ಕ್ಷಮಿಸೀಗಳ್ ನಲಹು ನಿನ್ನ ಪದಯುಗಕೆ ನಾಂ। ನಮಿಸಿ ಶಿರಬಾಗಿಪೆಂ ಬಹು। ರಮಿಸೆಲೆ ಸುರತಾಮೃತಾಂಬುನಿಧಿ ಯೊಳಗೆನ್ನಂ ॥

ಪ್ರಾಣಕಾಂತೆಯೇ ನೀನು ನನ್ನಲ್ಲಿ ಯಾವ ಅಪರಾಧವಿದ್ದರೂ ಕ್ಷಮಿಸಿ ಕಾಪಾಡಬೇಕೆಂದು ನಮಸ್ಕರಿಸಲು ಆಗ ಅಂಜನೆಯು ದೂರ ಸರಿದು ನಿಂತು ಜಿನ ಜಿನ ಎಂದು ಕಣ್ಮುಚ್ಚಿ ಇದೇನನ್ಯಾಯುವು, ನನಗೆ ಹಿಂದಿನ ಕರ್ಮವು ಇನ್ನೂ ಸವೆದುದಿಲ್ಲ ಮತ್ತಷ್ಟು ಕರ್ಮವು ಪ್ರಾಪ್ತಿಯಾಗಬೇಕೆ ? ಕಾಂತನೆ ನಿನ್ನ ಕಾಂತೆಯಾದ ನನ್ನ ಪಾದಗಳಿಗೆ ನಮಸ್ಕಾರ ಮಾಡಲುಚಿತವೇ, ಹಾ ವಿಧಿಯೇ ಇದು ನಿನಗೆ ಯೋಗ್ಯವೇ ? ಒಂದು ಕೋಟಿ ವೇಳೆ ನಿನಗೆ ನಮಸ್ಕ ರಿಸುವೆನು ನಿನ್ನ ಮನೋರಥವನ್ನು ಸಲಿಸುವೆನು ಎಂದು ಪತಿಯನ್ನು ಸಂತೈಸಿ ಆ ರಾತ್ರಿ ದಂಪತಿಗಳು ಸುಖಸಂಕಥಾ ವಿನೋದಗಳಿಂದ ನಿದ್ರೆಯನ್ನು ಮಾಡುತ್ತಿರಲು ಬೆಳಗಿನ ಝಾವವಾಗೋಣ ಆಗ ಸಖನಾದ ಪ್ರಹಸಿತನು ಎದ್ದು ಅಂತಃಪುರಕ್ಕೆ ಬಂದು ಸಖಿಯಾದ ವಸಂತಮಾಲೆಯನ್ನು ಎಚ್ಚರಗೊಳಿಸಿ ನೀನು ನಮ್ಮ ಮಹಾರಾಜನಿಗೆ ಬೆಳಗಾಯಿತು, ಇನ್ನು ಯುದ್ಧಕ್ಕೆ ಹೊರಡಬೇ ಕಾಗಿರುವುದರಿಂದ ಎಚ್ಚರಗೊಳಿಸಿ ತಿಳಿಸು ಎನಲು ಆಗ ಆ ಸಖಿಯಾದ ವಸಂತೆ ಮಾಲೆಯು ಎದ್ದು ಹೋಗಿ ಪವನಂಜಯನನ್ನು ಎಚ್ಚರಗೊಳಿಸಿ ಪ್ರಹಸಿತನು ಹೇಳಿದ ವಿಷಯವನ್ನು ಅವನಿಗೆ ತಿಳಿಸಲು ಅದರಂತೆ ರಾಜನು ಎದ್ದು ಕುಳಿತು

ಇರುವ ಸಮಯದಲ್ಲಿ ಅಂಜನಾದೇವಿಯು ಎಚ್ಚತ್ತು ಕುಳಿತಿರುವ ಸಮಯದಲ್ಲಿ ಪ್ರಹಸಿತನು ಬಂದು ಮಹಾರಾಜನೇ ಇನ್ನು ಅರುಣೋದಯವಾದೀತು ನಿನ್ನ ತಂದೆಯ ಆಜ್ಞೆಯಂತೆ ಯುದ್ಧಕ್ಕೆ ಹೊರಡಬೇಕಲ್ಲವೇ ಎನಲು ಆಗ ಅಂಜನೆ ಯನ್ನು ಕುರಿತು ರಾಜನು,ಪ್ರಾಣಕಾಂತೆಯೇ ನಾನು ವರುಣನನ್ನು ಸಮರದಲ್ಲಿ ಜಯಿಸಿ ರಾವಣನಿಗೆ ತೃಪ್ತಿಪಡಿಸಿ ಸ್ವಲ್ಪ ದಿವಸಗಳಲ್ಲಿಯೇ ಬರುವೆನು ನೀನು ವ್ಯಸನಪಡಬೇಡ ಎನಲು ಆಗ ಅಂಜನೆಯು ಪತಿಯನ್ನು ಕುರಿತು ದುಃಖದಿಂದ

ರಾಗ—ಧನ್ಯಾಸಿ—ಆದಿತಾಳ

ನೈರಿನಲೆಂತಕಟ | ವರ ಪ್ರಾಣಕಾಂತನೇ | ತೊರೆದು ನಾ ನಿನ್ನನು | ಇರುವ ಬಗೆಯನರುಹು || ಪಲ್ಲ || ಗುಟ್ಟನಿಂದಲೆ ಬಂದು | ಇಷ್ಟದಿಂದೆನ್ನ ಕೂಡಿ | ಕಷ್ಟಕೀಡನುಮಾಡಿ | ಸೃಷ್ಟೀಶ ಪೋಗುವರೇ || ೧ || ರುತುಕಾಲ ಒದಗಿರೆ | ರತಿಕ್ರೀಡೆಯನಾಡಿ | ಪತಿಯೆ ನೀ ರಣಕೆ ಪೋಗೆ | ಗತಿಯೇನುಮುಂದೆನಗೇ || ೨ || ಹನ್ನೆರಡು ವರುಷದಿಂದ | ಎನ್ನನು ತೊರೆದಿರ್ದು | ಸನ್ನುತ ನೀನು ಪೋಗೆ | ಬನ್ನವು ಬರುವುದೋ || ೩ ||

ಪ್ರಾಣಕಾಂತನೇ ಹನ್ನೆರಡು ವರ್ಷಗಳಿಂದ ಸರ್ವರೂ ಕಾಣುವಂತೆ ನನ್ನನ್ನು ತೊರೆದು ನಿನ್ನೆಯ ದಿನ ನನ್ನನ್ನು ಧಿಕ್ಕರಿಸಿ ಸಮರಕ್ಕೆ ಹೋಗಿ ಪುನಃ ಮರಳಿ ರಾತ್ರಿಯಲ್ಲಿ ಯಾರೂ ಕಾಣದಂತೆ ಇಲ್ಲಿಗೆ ಬಂದು ನನಗೆ ರುತುಕಾಲ ಒದಗಿರುವ ಸಮಯದಲ್ಲಿ ನೀನು ನನ್ನಲ್ಲಿ ಬೆರೆತು ರತಿಕ್ರೀಡೆಯನ್ನಾಡಿ ಈಗ ನೀನು ಯುದ್ಧಕ್ಕೆ ಹೊರಟುಹೋದರೆ ಮುಂದೇನಾದರೂ ನಾನು ಅಪವಾದ ಕ್ಕೊಳಗಾಗುವ ಸಂಭವವುಂಟಾದೀತು ಆದ್ದರಿಂದ ಪ್ರಾಣಕಾಂತನೇ ನೀನು ಬಂದಿರುವ ಸಂದರ್ಭವನ್ನು ಅರಮನೆಯಲ್ಲಿ ಯಾರಿಗೂ ತಿಳಿಸದೆ ಗುಟ್ಟಾಗಿ ಹೋಗುವುದು ಖಂಡಿತವಾಗಿಯೂ ಸಮವಲ್ಲ ಎನಲು ವಾಯುಕುಮಾರನು ಪ್ರಾಣಕಾಂತೆಯೇ ಏತಕ್ಕಿಷ್ಟು ಚಿಂತಿಸುತ್ತೀಯೆ ನನ್ನ ನಿನ್ನ ಮಿತ್ರರು ತಿಳಿದಿ ರುವರಲ್ಲ ಭಯವೂ ದುಃಖವೂ ಯಾತಕ್ಕೆ ಈ ಕಳವಳವನ್ನು ಬಿಡು ಎಂದು ಹೇಳಲು ಆಗ ಅಂಜನೆಯು ಆರ್ಯಪುತ್ರನೇ ನೀನು ಪರಕಾರ್ಯಕ್ಕೆ ಕೆಲವು ಕಾಲ ತಡೆದರೆ ಆಗ ನನ್ನ ಗತಿಯೇನಾಗುವುದೋ ? ನಿನ್ನ ಮಿತ್ರನಾದ ಪ್ರಹಸಿ ತನು ನಿನ್ನ ಜೊತೆಯಲ್ಲಿ ನಿನ್ನ ಸೇವೆಯಲ್ಲಿರುವನು ನನ್ನ ಸಖಿಯಾದ ವಸಂತ ಮಾಲೆಯು ನನ್ನವಳೆನ್ನುವರು. ಆದಕಾರಣ ನೀನು ಅರಮನೆಗೆ ಹೋಗಿ

ನಿನ್ನ ತಂದೆತಾಯಿಗಳಿಗೆ ಕಾಣಿಸಿಕೊಂಡು ಸಂಭಾಷಣೆ ಮಾಡಿ ಭೋಜನ ವನ್ನೂ ಸಹ ಮಾಡಿ ಹೊರಡು ಇದರಿಂದ ಯಾವ ಸಂಶಯವೂ ಇರುವುದಿಲ್ಲ. ಈ ಸಂಗತಿಯನ್ನು ಯಾರಿಗೂ ತಿಳಿಸದೆ ಹೋಗುವುದು ಸಮನಲ್ಲ ಎಂದು ಪತಿ ಯನ್ನು ಬೇಡಿಕೊಳ್ಳಲು ಆಗ ಅಂಜನೆಯನ್ನು ಕುರಿತು ಪವನಂಜಯನು ಪ್ರಾಣಕಾಂತೆಯೇ ಈ ಚಿಂತೆಯನ್ನೂ ಸಂಶಯವನ್ನೂ ಬಿಡು ಯುದ್ಧಕ್ಕೆ ಹೊರಟು ರಣಭೇರಿಯನ್ನು ಹೊಯ್ಸಿಹೋಗಿದ್ದ ನಾನು ಈಗ ಹಿಂತಿರುಗಿಬಂದಿ ರುವುದುಚಿತವಲ್ಲ ಹೀಗಿರುವಲ್ಲಿ ನಾನು ತಂದೆತಾಯಿಗಳಿಗೆ ಆಗಲಿ ಅಥವಾ ಇತರರಿಗೆ ಆಗಲಿ ನಾನು ಮುಖವನ್ನು ತೋರಿಸಲು ನನಗೆ ನಾಚಿಕೆಯಾಗು ವುದು ಆದ್ದರಿಂದ ನಾನು ಅರಮನೆಗೆ ಹೋಗಲಾರೆನು ಈ ಭಯವನ್ನು ಬಿಡು

ಕುರುಹುಗೋಸುಗ ತನ್ನ ಭುಜಭಾಪುರಿಯನು । ಅರಸಿ ಅಂಜನೆಗೆ ಭರವ
ನೆಯ ॥ ಸರಿಸಿ ಹೊರಟನು ತನ್ನ ವಿಮಾನದೋಳ್ । ಭರದಿಂದ ವರುಣ
ನಾಹವಕೆ ॥

ಪ್ರಾಣಕಾಂತೆಯೇ ನೀನು ಹೆದರಬೇಡ ಇಗೋ ನನ್ನ ಕುರುಹುಗೋ ಸ್ಕರ ನನ್ನ ಬಾಹುಭಾಪುರಿಯನ್ನು ನಿನಗೆ ಕೊಡುತ್ತೇನೆ ತೆಗೆದುಕೊ. ಅಪಾಯ ಸಂಭವಿಸಿದಲ್ಲಿ ಈ ಗುರುತೇ ನಿನ್ನನ್ನು ಕಾಪಾಡುವುದು. ನಾನು ಹೋಗಿಬರುತ್ತೇನೆಂದು ಹೇಳಿ ಸಂತೈಸಿ ಭಾಪುರಿಯನ್ನು ಕೊಟ್ಟು ತಾನು ಬೀಡುಬಿಟ್ಟಿದ್ದ ಸ್ಥಳಕ್ಕೆ ಪ್ರಹಸಿತನೊಡನೆ ಹೊರಟುಬಂದು ಅಲ್ಲಿದ್ದ ತನ್ನ ಸೈನ್ಯಾಧಿಪತಿ, ಸೈನ್ಯ ಪರಿವಾರದೊಂದಿಗೆ ಹೊರಟುಹೋಗಿ ರಾವಣೇಂದ್ರನ ಸೈನ್ಯಪರಿವಾರವನ್ನು ನೇರಿ ಆ ವರುಣ ರಾಜನೊಂದಿಗೆ ಖಾಡಾಖಾಡಿ ಯುದ್ಧ ಮಾಡುತ್ತಾ ಇರುತ್ತಾನೆ ಕೆಲವು ದಿವಸಗಳು ಕಳೆದನಂತರ ಇತ್ತ ಅಂತಃಪುರ ದಲ್ಲಿ ತನ್ನ ಸಖಿಜನರೊಂದಿಗಿದ್ದ ಆ ಅಂಜನಾದೇವಿಗೆ

ತರುಣಿ ಅಂಜನೆಗೆ ಗರ್ಭವಂಕುರಿಸಲು । ಉರುತರ ಚಿಹ್ನೆಗಳ್ ಕಾಣಿಸಲು॥
ಅರಸಿಯ ಸಖಿ ಬಂದು ಇದರಂತರ್ಯವ । ಒರೆದಳು ತನ್ನಯ ರಾಣಿಯೊಳು ॥

ಅಂಜನಾದೇವಿಗೆ ಗರ್ಭವು ಅಂಕುರಿಸಲು ಚಿಹ್ನೆಗಳೆಲ್ಲ ಕಾಣಿಸಿಕೊಳ್ಳಲು ಹಾ ದೈವವೇ ನಾನು ಗರ್ಭಿಣಿಯಾಗಿರುವೆನು ಗರ್ಭಚಿಹ್ನೆಗಳು ತೋರುತ್ತಿವೆ ಯೆಂದು ವ್ಯಥೆಪಡುತ್ತ ವಸಂತಮಾಲೆಯನ್ನು ಕುರಿತು ಸಖಿಯೆ ನಾನೇನು

ಹೇಳಲಿ ಪ್ರಾಣಕಾಂತನನ್ನು ಎಷ್ಟು ವಿಧವಾಗಿ ಬೇಡಿಕೊಂಡರೂ ಉದಾಸೀನ ಮಾಡಿದನು ಈಗ ನನಗೆ ಗರ್ಭಚಿಹ್ನೆಯು ಸಕಲರಿಗೂ ಸ್ಪಷ್ಟವಾಗಿ ತಿಳಿಯು ವಂತೆ ಆಯಿತಲ್ಲ ಇನ್ನೇನು ಮಾಡ ವುದು ಎಂದು ಚಿಂತಿಸುತ್ತಿರಲು ಆಗ ಆ ಸಖಿಯು ತಾಯಿಯೇ ಇದಕ್ಕೆ ಚಿಂತೆಯೇನು ? ನಿನ್ನ ಅತ್ತೆಯಾದ ಕೇತುಮ ತಿಯು ತಿಳಿದರೆ ಹೇಗೋ ಎನ್ನುವುದೊಂದೇ ಕಳವಳವು ಅವಳು ಮೊದಲೇ ಉಗ್ರ ಗ್ರಹವು. ಇದು ಅವಳಿಗೆ ತಿಳಿದರೆ ಆಕೆಯ ದೂಷಣೆಗೆ ಎಣೆಯೇ ಇಲ್ಲವೆಂದು ಹೇಳುತ್ತಿರುವಷ್ಟರಲ್ಲಿಯೇ ರಾಣಿಯಾದ ಕೇತುಮತಿಯ ಸಖಿಯು ಬಂದು ವಂದಿಸಿ ಅವಳ ಯೋಗಕ್ಷೇಮವನ್ನು ವಿಚಾರಿಸಲು ಆಗ ಅಂಜನಾದೇವಿಯು ನಮ್ಮ ಮಾತೃಶ್ರೀ ಮಹಾರಾಣಿಯವರಾದ ಅತ್ತೆಯವರಿಗೆ ಕುಶಲವೇ ಎಂದು ಆ ಸಖಿಯನ್ನು ಕೇಳಲು ಆಗ ರಾಣಿಯಾದ ಕೇತುಮತಿಯ ಸಖಿಯು ಈ ಅಂಜನೆಯನ್ನು ಚೆನ್ನಾಗಿ ನೋಡಿ ಗರ್ಭಿಣಿಯಾಗಿದ್ದಾಳೆಂದು ತಿಳಿದು ಇದೇನು ವಿಚಿತ್ರವು ಪತಿಯ ಸಂಗವನ್ನು ಸ್ವಪ್ನದಲ್ಲಿಯೂ ಕಾಣಳು ಈ ಗರ್ಭವಾಗ ಲಿಕ್ಕೆ ಏನು ಕಾರಣ? ಇದನ್ನು ನಮ್ಮ ಮಹಾರಾಣಿಗೆ ತಿಳಿಸಿದರೆ ಈ ಅಂಜನೆಗೆ ಏನು ಅಪಾಯವು ಸಂಭವಿಸುವುದೋ ? ತಿಳಿಸದಿದ್ದರೆ ನನಗೇನು ಶಿಕ್ಷ ವಿಧಿಸು ತ್ತಾಳೋ ? ಹ್ಯಾಗಾದರೂ ಆಗಲಿ, ನನ್ನ ಕರ್ತವ್ಯವನ್ನು ನಾನು ಮಾಡಲೇ ಬೇಕೆಂದು ತನ್ನ ಮನಸ್ಸಿನಲ್ಲಿ ಆಲೋಚಿಸಿ ನಿನ್ನ ಅತ್ತೆಯು ಕ್ಷೇಮದಿಂದಿದ್ದಾಳೆ ಇನ್ನು ನಿನ್ನ ಕ್ಷೇಮ ಹೇಗೋ ನಾನು ಕಾಣೆನು ನಾನು ಬಂದು ಬಹಳ ಹೊತ್ತಾಯಿತು ಹೋಗುತ್ತೇನೆಂದು ಹೇಳಿ ಹೊರಟುಹೋಗಿ ತನ್ನ ಒಡತಿ ಯಾದ ಕೇತುಮತಿಯು ಸಂಗಡ ಅಂಜನೆಯು ಗರ್ಭಿಣಿಯಾಗಿರುವ ಸಂಗತಿ ಯನ್ನು ಹೇಳಲು ಆಗ ಆ ಕೇತುಮತಿಯು ತನ್ನ ಸಖಿಯೊಡನೆ ಪ್ರಹ್ಲಾದರಾಜನ ಬಳಿಗೆ ಬಂದು ತನ್ನ ಕಾಂತನಿಗೊಂದಿಸಿ ಕಾಂತನೇ ಹೇಳಲಿಕ್ಕೂ ಹೇಳದಿರ ಲಿಕ್ಕೂ ಮನಸ್ಸು ಕಳವಳಿಸುತ್ತಿದೆ ಎನಲು ಆಗ ರಾಜನು ಪ್ರಿಯೆ ಬಾಧಕವಿಲ್ಲ ಯಾವದಿದ್ದರೂ ಧೈರ್ಯದಿಂದ ಹೇಳು ಎನಲು ಆಗ ಆ ಕೇತುಮತಿಯು ಪತಿ ಯನ್ನು ಕುರಿತು

ರಾಗ—ಆದಿತಾಳ

ಏನ ಪೇಳಲೀಗ ಪ್ರಿಯನೆ । ಹೀನವಾರ್ತೆಯನ್ನು ನಿನ್ನೊಳ್ ॥ ನಾನು ಸೈರಿ ಸುವುದೆಂತು । ಮಾನಹಾನಿಯಾದುದು ॥ ೧ ॥ ಸುತ ವಾಯುಪುತ್ರ ತಾನು

ಹಿತವನ್ನು ತೋರದೆಯೇ । ಸತಿಯಳ ತೊರೆದುದರಿಂ । ಚ್ಯುತಿಒಂದಿತೀ ಕುಲಕೆ ‖ ೨ ‖ ದುರುಳೆ ಅಂಜನೆ ಗರ್ಭ । ಧರಿಸಿರುವುದೇಂ ಚಿತ್ರ । ಪುರ ದೊಳೀ । ವಾರ್ತೆ ಪಸರಿ । ಸಿರುವುದ ಕೇಳಲಾರೆ ‖ ೩ ‖

ಪ್ರಿಯನೆ ನಮ್ಮ ಸೊಸೆಯು ಪತಿಸಂಭೋಗವಿಲ್ಲದೆ ಗರ್ಭವತಿಯಾಗಿದ್ದಾಳೆಂದು ಇಗೋ ಈ ಸಖಿಯಿಂದ ತಿಳಿಯಿತು ಕುಲಕ್ಕೆ ಕುಂದನ್ನು ತಂದಿರುವುದರಿಂದ ಇವಳನ್ನು ಇಲ್ಲಿ ಕಾಪಾಡುವುದು ಹೇಗೆ? ಇದ್ದ ಸಂಗತಿಯನ್ನು ಅರಿಕೆ ಮಾಡಿರುತ್ತೇನೆ ಎಂದು ಪ್ರಹ್ಲಾದರಾಜನಿಗೆ ತಿಳಿಸಲು ಆಗ ಆ ರಾಜನು ಇದೊಂದು ಕುಲಕ್ಕೆ ಕುಂದುಬಂದಿತೇ ? ಅಕಟಾ ! ಈಗೇನುಮಾಡಲಿ ? ಸ್ತ್ರೀಯರು, ಅನೃತಂ, ವಂಚನಂ, ಮಾಯಾ, ಮೂರ್ಖತ್ವಂ, ಚಲಚಿತ್ತತಾಂ ‖ ನಿರ್ದಾಕ್ಷಿಣ್ಯಮಶೌಚತ್ವಂ ಸ್ತ್ರೀಣಾಂ ಸಪ್ತ ಸ್ವಭಾವಾತ್ ‖ ಎಂಬಂತೆ ಈ ಏಳು ಗುಣಗಳು ಸ್ತ್ರೀಯರಿಗೆ ಸ್ವಭಾವವಾದುದರಿಂದ ಎಂತಹ ಸ್ತ್ರೀಯರನ್ನೂ ನಂಬಲಾಗದು ಒಳ್ಳೇದು ಮಂತ್ರಿಯಲ್ಲಿ ಆಲೋಚಿಸುವೆನು ಎಂದು ಯೋಚಿಸಿ ಮಂತ್ರಿಯೆ ನಮ್ಮ ನೊಸೆಯು ನಡೆಸಿರುವ ದುಷ್ಕೃತ್ಯಕ್ಕೋಸ್ಕರ ಆಕೆಯನ್ನು ಪುರದಿಂದ ಹೊರಡಿಸುವುದೇ ಶಿಕ್ಷೆಯಲ್ಲವೇ ಎಂದು ತನ್ನ ಮಂತ್ರಿಯನ್ನು ದೊರೆಯು ಕೇಳಲು ಆಗ ಮಂತ್ರಿಯು ರಾಜನನ್ನು ಕುರಿತು ಮಹಾರಾಜನೆ ಸ್ತ್ರೀಯರನ್ನು ನಂಬತಕ್ಕದ್ದಲ್ಲವೆಂದು ಅನೇಕ ಶಾಸ್ತ್ರಗಳು ಹೇಳುತ್ತವೆ ಆದರೂ ನಿಮ್ಮ ಸೊಸೆಯನ್ನು ಪತಿವ್ರತಾಶಿರೋಮಣಿಯೆಂತಲೇ ಭಾವಿಸುತ್ತೇನೆ. ಆದ್ದರಿಂದ ಆಕೆಯನ್ನು ಪುರದಿಂದ ನೂಕಿಸಬೇಕಾದ ಸಂದರ್ಭದಲ್ಲಿ ತಮ್ಮ ಸುಕುಮಾರನು ಬರುವವರೆಗೂ ನಿಧಾನಿಸಬೇಕು. ಪೂರ್ವಾಪರ ಯೋಚನೆಯಿಲ್ಲದೆ ದುಡುಕಿದರೆ ಅನರ್ಥಕ್ಕೆ ಗುರಿಯಾದೀತು ಇಷ್ಟರಮೇಲೆ ಪ್ರಭುಚಿತ್ತ ನಾನು ಇಲ್ಲಿರುವುದು ಸರಿಯಲ್ಲ ಇನ್ನು ಹೋಗುವೆನು ಎಂದು ಹೇಳಿ ಹೊರಟು ಹೋಗಲು ಆಗ ರಾಜನು, ರಾಣಿಯೇ ಮಂತ್ರಿಯು ಸದುತ್ತರವನ್ನು ಹೇಳದೆ ಹೊರಟುಹೋದನು ಆದ್ದರಿಂದ ನೀನು ಈ ಕ್ಷಣವೇ ಹೋಗಿ ಪ್ರತ್ಯಕ್ಷದಲ್ಲಿ ಗರ್ಭ ನಿಶ್ಚಯವಾಗಿದ್ದರೆ ಪ್ರತ್ಯುತ್ತರವನ್ನು ಅಪೇಕ್ಷಿಸದೆ ಚರರಿಂದ ಆಕೆಯನ್ನು ತ್ವರ್ಯವಾಗಿ ಅರಣ್ಯಕ್ಕೆ ಕಳುಹಿಸಬೇಕಾದುದೇ ಕರ್ತವ್ಯವು ಆದ್ದರಿಂದ ಬೇಗ ಹೋಗಿ ವಿಚಾರಿಸು ಎಂದು ಹೇಳಲು ಆಗ ಆ ಕೇತುಮತಿಯು ನನ್ನ ಮನಸ್ಸಿನಲ್ಲಿದ್ದಂತೆ ನನ್ನ ಪ್ರಾಣಕಾಂತನೂ ಹೇಳಿರುವ ಕಾರಣ ಈ ಕ್ಷಣವೇ ಅವಳನ್ನು

ನೂಕುವೆನು ಎಂದು ತಾನು ಬೇಗ ಅಂಜನಾದೇವಿಯ ಅಂತಃಪುರಕ್ಕೆ ಬರಲು ಆಗ ಅಂಜನೆಯು ತನ್ನ ಅತ್ತೆಗೆ ವಂದಿಸಲು ಕೇತುಮತಿಯು ಕೋಪದಿಂದ ನಮ್ಮ ಸಖಿಯ ಮಾತು ಸತ್ಯವಾದುದು ಗರ್ಭಚಿಹ್ನೆಯು ಚೆನ್ನಾಗಿ ಗೋಚರ ವಾಗುತ್ತಿದೆ ಕೈ ಹುಣ್ಣಿಗೆ ಕನ್ನಡಿಯೇ ಆಗಬೇಕೆ ? ಎಲೆ ನೀಚಳೆ ನಿನ್ನಿಂದ ನಮ್ಮ ಕುಲಕ್ಕೆ ಅಪವಾದ ಬಂದಿತು ಈ ಜಾರ ಗರ್ಭವನ್ನು ಗೂಢವಾಗಿ ಎಲ್ಲಿ ಆರ್ಜಿಸಿದೆ ? ಈ ಖೇಚರಕುಲಕ್ಕೆ ಅಪಕೀರ್ತಿಯನ್ನು ಹಬ್ಬಿಸಲಿಕ್ಕೆ ನಿನ್ನ ಮನಸ್ಸು ಹೇಗೆ ಬಂತು ? ಛೀ ದುಷ್ಟಳೆ, ಈ ದುರ್ನಡತೆಯನ್ನು ತಿಳಿದೇ ನನ್ನ ಪುತ್ರನು ನಿನ್ನನ್ನು ಸೇರದೆ ತೊರೆದಿರುವನು ಛೀ ಭ್ರಷ್ಟಳೆ ನಮ್ಮ ಅರಮನೆ ಯನ್ನು ಬಿಟ್ಟುಹೋಗು ನೀನು ಖಂಡಿತವಾಗಿಯೂ ಇಲ್ಲಿರಕೂಡದು ಎಂದು ಕೇತುಮತಿಯು ಅಂಜನೆಯನ್ನು ಧಿಕ್ಕರಿಸಲು ಆಗ ಅಂಜನೆಯು ಹಾ ಜಿನ, ಜಿನ, ಹೀಗೆ ಆಡಿಸಿಕೊಳ್ಳುವ ವಿಧಿಯು ಒದಗಿತೇ ? ಅತ್ತೆಯೇ ಏತಕ್ಕೆ ತುಚ್ಛ ವಾಗಿ ಆಡುತ್ತೀಯೆ ? ನಾನು ಕನಸುಮನಸುಗಳಲ್ಲಿಯೂ ಪರಪುರುಷನನ್ನು ಅಪೇಕ್ಷಿಸುವವಳಲ್ಲ ತ್ರಿಕರಣಶುದ್ಧವಾಗಿ ಪತಿಯನ್ನೇ ದೇವರೆಂದು ನಂಬಿರುವ ನನ್ನನ್ನು ನಿಂದಿಸಬಹುದೇ ? ಜಾರಗರ್ಭವೆನ್ನಬಹುದೇ ? ಇದು ನನ್ನ ಕರ್ಮೋ ದಯವು ಎನಲು ಆಗ ಕೇತುಮತಿಯು ಏನೇ, ಗರತಿಯೆ ನನ್ನ ಪುತ್ರನು ನಿನ್ನನ್ನು ಬಿಟ್ಟಿರುವುದು ಎಲ್ಲರೂ ಬಲ್ಲರು ಈ ನಡುವೆ ಯಾವ ದಿವಸ ಬಂದಿದ್ದ ಎನಲು ಅಂಜನೆಯು, ಅತ್ತೆಯೆ ನನ್ನ ಪತಿಯು ಆ ವರುಣನ ಯುದ್ಧಕ್ಕೆ ಹೋದ ದಿನದ ರಾತ್ರಿಯಲ್ಲಿಯೇ ತನ್ನ ಸಖನಾದ ಪ್ರಹಸಿತನೊಂದಿಗೆ ನನ ಅಂತಃಪುರಕ್ಕೆ ಸಖಿಯರೆಲ್ಲರೂ ತಿಳಿಯುವಂತೆ ಬಂದು ನನ್ನನ್ನು ವರಿಸಿ ಸುರತ ಕ್ರೀಡೆಯನ್ನಾಡಿ ಹೋದನು ಎನಲು ಆ ಕೇತುಮತಿಯು ವಸಂತಮಾಲೆಯು ನಿನಗೆ ಪರಮ ಆಪ್ತಳೆ ಮತ್ತು ಸಖಿಯರೆಲ್ಲರೂ ನಿನ್ನ ಅಧೀನದಲ್ಲಿಯೇ ಇರು ವವರು, ನನಗೆ ನಂಬಿಕೆ ಇಲ್ಲವೆನಲು ಆಗ ವಸಂತಮಾಲೆಯು ಅವಳನ್ನು ಕುರಿತು, ಮಹಾರಾಣಿಯೆ ಕೇಳು, ನಿನ್ನ ಮಗನು ಆದಿನ ಬಂದು ತನ್ನ ಪತ್ನಿ ಯಾದ ಈ ಅಂಜನೆಯಲ್ಲಿ ಸುಖಿಸಿ ಹೋಗುವಾಗ ನಿನ್ನ ತಾಯಿಯ ಸಂಗಡ ಹೇಳಿಹೋಗಬೇಕೆನಲು ನನಗೆ ನಾಚಿಕೆಯಾಗುತ್ತೆಂತ ಹೇಳಿ ಅಂತಹ ವಿಪತ್ತು ಸಂಭವವಾದಲ್ಲಿ ಕುರುಹುಗೋಸ್ಕರ ಈ ಭಾಪುರಿಯನ್ನು ತೆಗೆದುಕೋ ಇದನ್ನು ನೋಡಿ ನನ್ನ ತಂದೆತಾಯಿಗಳು ನಂಬುವರೆಂದು ಹೇಳಿ ಕೊಟ್ಟ ಈ ಭಾಪುರಿ

ಯನ್ನು ಇಗೋ ನೋಡು ಈಗಲಾದರೂ ನೀನು ನಂಬಬಾರದೆ ? ಏತಕ್ಕೆ ಸ್ವೇಚ್ಛೆಯಾಗಿ ಹೇಳುವಿಯೆಂದು ತೋಳ ಭಾಪುರಿಯನ್ನು ಅವಳಿಗ ತೋರಿಸಲು ಆಗ ಕೇತುಮತಿಯು, ಛೀ ರಂಡೆಯೇ, ನಿನ್ನಿಂದಲೇ ನಮ್ಮ ವಂಶಕ್ಕೆ ಅಪಕೀರ್ತಿ ಬಂದಿತು. ಇಂಥಾ ಭಾಪುರಿಗಳು ನಮ್ಮ ಅರಮನೆಯಲ್ಲಿ ಅನೇಕ ಇರುತ್ತವೆ ಇದು ನಿನ್ನ ಕುಯುಕ್ತಿ ತಂತ್ರಗಳು. ಇದನ್ನು ನಾನು ನಂಬುತ್ತೇನೆಯೇ ಎಲೆ ಅಂಜನೆ, ಭ್ರಷ್ಟಳೆ ?

ರಾಗ—ತಾಳ

ಛೀ ಛೀ ನಡೆ ನಡೆ ಬೇಗ । ನೀಚಳೆ ನೀನಲ್ಲದೆ ॥ ಪಲ್ಲ ॥ ನಾಚಿಕೆಯಿಲ್ಲದೆ ಮರೆಮಾಚುವೆಯೆನ್ನೊಳು ॥ ಅ ಪಲ್ಲ ॥ ದುರುಳೆಯೆ ನೀನಿಂತು । ಪರಪುರುಷನ ಕೂಡೀ । ಪರಿಯೊಳು ಗರ್ಭವ । ಧರಿಸುವೆಯ ಛೀ ॥ ೧ ॥ ಎನ್ನ ಸುಕುಮಾರನು । ಕಣ್ಣೆತ್ತಿ ನೋಡದೆ । ಹನ್ನೆರಡು ವರುಷದಿಂ । ನಿನ್ನನು ತೊರೆದಿರೆ ॥ ೨ ॥

ಜಾರೆಯೆ, ನೀನು ನಿನ್ನ ಈ ನೀಚಸಖಿಯರನ್ನೊಳಗೂಡಿಕೊಂಡು ಪಾಪಕ್ಕೂ ಅಪಕೀರ್ತಿಗೂ ಹೆದರದೆ ಈ ಕೆಟ್ಟ ಕೃತ್ಯವನ್ನು ಮಾಡಿರುವ ನೀಚಳೆ ಈ ಕ್ಷಣವೇ ನಮ್ಮ ಅರಮನೆಯನ್ನು ಬಿಟ್ಟು ತೆರಳು ಎನಲು ಆಗ ಅಂಜನೆಯು ಕಣ್ಣೀರನ್ನು ಸುರಿಸುತ್ತಾ ಅತಿ ದುಃಖದಿಂದ ತನ್ನ ಅತ್ತೆಯನ್ನು ಕುರಿತು

ರಾಗ—ಕಾನಡ

ಏತಕೆ ಕೋಪಿಪೆ । ಮಾತನು ಲಾಲಿಸು । ನೀತಿಯೆ ನಿನಗಿದು । ಪ್ರೀತಿಯ ತೊರೆದಿಂತು ॥ ೧ ॥ ಪತಿಯೇ ದೇವನು ಎಂದು । ಸತತವು ನಂಬಿದ । ಸತಿಯೊಳಿಂತು ನೀನು । ಖತಿಯನು ತಾಳ್ವುದು ॥ ೨ ॥ ಸನ್ನುತ ಗುಣಮಣಿ । ಎನ್ನ ಪತಿಯು ಬರು । ವನ್ನೆಗೂ ಎನ್ನನು । ಮನ್ನಿಸಿ ಪಾಲಿಸು ॥ ೩ ॥

ಅತ್ತೆಯೇ ನಿನಗೆ ನಂಬಿಗೆಯನ್ನು ಹೇಳಲು ಸಮರ್ಥಳಲ್ಲ ಆದುದರಿಂದ ನಿಮ್ಮ ಪುತ್ರನು ಬರುವವರೆಗಾದರೂ ಕ್ಷಮಿಸಿ ನನ್ನನ್ನು ಕಾಪಾಡಬೇಕೆಂಬುದೇ ನನ್ನ ಪ್ರಾರ್ಥನೆಯೆಂದು ಅತ್ತೆಯಾದ ಕೇತುಮತಿಯನ್ನು ಅಂಜನೆಯು ಬೇಡಿಕೊಳ್ಳುತ್ತಿರಲು ಆಗ ವಸಂತಮಾಲೆಯು ಕೇತುಮತಿಯನ್ನು ಕುರಿತು

ರಾಗ

ಈ ಪರಿಯೊಳು ನೀನು । ಕೋಪವ ಮಾಳ್ಪುದೆ । ಭೂಪನ ರಾಣಿಯೆ । ಕಾಪಾಡು

ಎಮ್ಮನು ‖ ೧ ‖ ಸತ್ಯಶೀಲೆಯು ತಾನು । ದುಷ್ಕೃತ್ಯವ ಮಾಡಲು । ವ್ಯರ್ಥ
ವಾಗಿ ನೀನರ್ಥದಿಂ ನೀಗುವೇ ‖ ೨ ‖ ಇಂದು ಕಾಡಿಗೆ ನೂಕೆ । ಬಂದು
ಪಾತಕವು । ಬಂಧವಾಗುವುದೈನೆ । ನಿಂದಿಸುವರು ಜನರು ‖ ೩ ‖ ಭಿನ್ನವ
ಯೋಚಿಸಿ । ಬನ್ನವಪಡಿಸರೆ । ನಿನ್ನ ತನುಜ ಬರು । ವನ್ನೆಗೂ ಸೈರಿಸು ‖೪‖

ಎಲೌ, ಮಹಾರಾಣಿಯೇ ನಿನ್ನ ಸೊಸೆಯಾದ ಅಂಜನೆಯು ಪತಿವ್ರತಾ ಶಿರೋಮಣಿ, ಸತ್ಯಶೀಲಳು ಎಂದಿಗೂ ದುಷ್ಕೃತ್ಯವನ್ನು ಮಾಡಿರುವುದಿಲ್ಲ ನೀನು ಅರಣ್ಯಕ್ಕೆ ನೂಕಿಸಿದರೆ, ನಿನಗೆ ಘೋರಪಾಪವು ಸಂಭವಿಸುವುದಲ್ಲದೆ ಲೋಕವೆಲ್ಲವೂ ನಿನ್ನನ್ನು ನಿಂದಿಸುವುದು ನೀನು ಅಪಕೀರ್ತಿಗೆ ಗುರಿಯಾಗುವೆ ನಾನು ಕೈಮುಗಿದು ದೀನಳಾಗಿ ಬೇಡಿಕೊಂಡಿರುವೆನು ಇನ್ನು ನಿನ್ನ ಮನಸ್ಸಿನ ಕೋಪವನ್ನು ಬಿಟ್ಟು ನಿನ್ನ ಸುಕುಮಾರನಾದ ವಾಯುಪುತ್ರನು ಬರುವವರೆಗೂ ಸೈರಿಸಿ ನಮ್ಮನ್ನು ಕಾಪಾಡು. ಅನಂತರ ನಿನಗೇ ತಿಳಿಯುವುದು ಹಾಗಲ್ಲದ ನೀನು ದುಡುಕಿ ನಿನ್ನ ಹಟವನ್ನೇ ನೀನು ಸಾಧಿಸಿಕೊಳ್ಳ ಬೇಕೆಂಬ ಉದ್ದೇಶವಿದ್ದರೆ ನಿನಗೆ ಘೋರಪಾತಕ ಬಂಧವಾಗಿ ರೌರವ ನರಕದಲ್ಲಿಳಿಯುವೆ. ಇದು ಸತ್ಯ ಎನಲು ಆಗ ಕೇತುಮತಿಯು ಅತಿ ಕೋಪದಿಂದ ಚಾರನನ್ನು ಕರೆದು ಈ ವಸಂತಮಾಲೆಯು ಸ್ವೇಚ್ಛೆಯಾಗಿ ಹರಟುತ್ತಾಳೆ ಈ ವಸಂತಮಾಲೆಯನ್ನೂ ಅಂಜನೆಯನ್ನೂ ಕರೆದುಕೊಂಡುಹೋಗಿ ಮಹೇಂದ್ರ ಪುರದ ಸಮೀಪದ ಅರಣ್ಯಕ್ಕೆ ಬೇಗ ಬಿಟ್ಟುಬನ್ನಿ ಎಂದು ಆಜ್ಞೆ ಮಾಡಲು, ಚಾರರು ಅಪ್ಪಣೆಯಂತೆ ನಡೆಸುವೆವು ಎಂದು ಹೇಳಿ ಸಖಿ ಮತ್ತು ಅಂಜನೆಯನ್ನು ಕುರಿತು, ಪರಸೇವೆಯೇ ಪರಮಕಷ್ಟ ಏನು ಮಾಡುವುದು ನಿಮ್ಮಗಳನ್ನು ಕಾಡಿಗೆ ಕಳುಹಿಸಬೇಕೆಂದು ನಮ್ಮ ಮಹಾರಾಣಿಯ ಆಜ್ಞೆಯಾಗಿದೆ. ಆಕೆಗೆ ನಿಮ್ಮಲ್ಲಿ ಏನು ವೈರವೋ ನಮಗೆ ತಿಳಿಯದು ನಮಗೆ ಅತಿ ಸಂಕಟವಾಗುವುದು ಎನಲು ಆಗ ಅಂಜನಾದೇವಿಯು ಅತಿ ದುಃಖದಿಂದ

ರಾಗ—ಮುಖಾರಿ—(ಹಾ ದೈವವೇ ನೀಂ)

ಹಾ ದೈವವೇ ನೀಂ ಯೇ ಗೈದೆಯೊ। ಹಾ ನಾಥ ನೀ ಎನ್ನ ಕೈ ಬಿಟ್ಟೆಯಾ
‖ ಪಲ್ಲ ‖ ಕಾನನಕೀಗಳು ನಾನೆಂತು ಪೋಗುವೆ ‖ ಹಾನಿ ಬಂದೊದಗಿತೇ।
ಏನೂ ತೋರದೆ ಹಾ ‖ ೧ ‖ ಹಿಂದೆ ಮಾಡಿದ ಪಾಪ । ಬಂಧವಾಗೆನ್ನನು।
ಇಂದು ಸಂಕಟಪಡಿಸೇ ಮಂದಭಾಗ್ಯಳು ನಾಂ ‖ ೨ ‖ ದೇವರ ದೇವನೆ।

ಪಾವನಮೂರ್ತಿಯೆ । ಭಾವಿಸಿ ನಮಿಸುವೆ ಕಾಯ್ವುದೆನ್ನನು ನೀಂ ॥ ೩ ॥

ಹಾ ದೈವವೇ ನನ್ನ ಪತಿಯಿಂದಲೇ ಈ ಕಷ್ಟ ಸಂಭವಿಸಿತು ಜಗತ್ತಿನಲ್ಲಿ ಸ್ತ್ರೀಯರಿಗೆ ಗರ್ಭವು ಆನಂದವನ್ನುಂಟುಮಾಡುವುದು ನನಗೆ ಇದು ಕಾಡಿಗೆ ಹೋಗಬೇಕಾದ ಫಲವು ಲಭಿಸಿತು ಪತಿಯು ಸಮೀಪದಲ್ಲಿದ್ದರೆ ಈ ರೀತಿ ಯಾಗುತ್ತಿರಲಿಲ್ಲ ಈ ಧೂಮಕೇತು ಸಮಳಾದ ಅತ್ತೆಯಿಂದ ಈ ಕಷ್ಟ ಬಂತು ಹಾ ಎಂದು ಮೂರ್ಛೆಯನ್ನು ಹೊಂದಲು ಸಖಿಯಾದ ವಸಂತ ಮಾಲೆಯು ಶೈತ್ಯೋಪಚಾರ ಮಾಡಲು ಅಂಜನೆಯು ಚೇತರಿಸಿಕೊಂಡು ಮೆಲ್ಲ ಮೆಲ್ಲನೆದ್ದು ದೈವವಿಲಾಸವನ್ನು ಏನೆಂದು ಹೇಳೋಣ ಅನ್ನುವಷ್ಟರಲ್ಲಿಯೇ ಚಾರರು ಬಂದು ಸಿದ್ಧವಾಗಿದೆ, ದಯಮಾಡಿಸಬೇಕೆನಲು ಆಗ ವಸಂತಮಾಲಿ ನಿಯು ನಾನು ಅಂಜನೆಯನ್ನು ಬಿಟ್ಟಿರಲಾರೆನು ಎಂದು ಅಂಜನಾದೇವಿಯೊಂ ದಿಗೆ ಹೊರಟುಹೋಗಲು ಚಾರರು ಅವರನ್ನು ಕರೆದುಕೊಂಡು ಹೋಗಿ ಮಹೇಂದ್ರಪುರಕ್ಕೆ ಸಮೀಪವಾದ ಅರಣ್ಯದಲ್ಲಿ ಬಿಟ್ಟು ತಾವು ವ್ಯಸನದಿಂದ ಎಲೈ ವನದೇವತೆಯರೇ ಈ ಅಂಜನಾದೇವಿಯನ್ನೂ ಸಖಿಯನ್ನೂ ನೀವು ಕಾಪಾಡಬೇಕೆಂದು ಕೈಮುಗಿದು, ನಮ್ಮಿಂದ ಯಾವ ಅಪರಾಧವಿದ್ದರೂ ಕ್ಷಮಿಸು ಇನ್ನು ನಾವು ಹೊರಡುವೆವು ಎನಲು ಅಂಜನೆಯು ಅವರನ್ನು ಕುರಿತು ದೈವವಿಲಾಸವಿದ್ದಂತೆ ಅನುಭವಿಸುತ್ತೇನೆ. ನಿಮ್ಮ ಅಪರಾಧವೇನೂ ಇಲ್ಲ, ನೀವು ಹೊರಡಿ ಎಂದು ಹೇಳಲು ಆ ಚಾರರು ಅಂಜನೆಗೆ ವಂದಿಸಿ ಹೊರಟುಹೋದರು. ಆಗ ಅಂಜನೆಯು ಅತಿದುಃಖದಿಂದ ಈ ಗರ್ಭವು ಅರಣ್ಯವಾಸಕ್ಕೋಸ್ಕರವೇ ಸಂಭವಿಸಿತೆ ? ಈ ನಿರ್ಮಾನುಷವಾದ ಈ ಘೋರ ಕಾಡಿನಲ್ಲಿ ಹೇಗೆ ಜೀವಿಸಲಿ ? ಹಾ ದೈವವೇ !

ರಾಗ

ನಡುಗಾಡೊಳು । ಬಿಡುತೆನ್ನನು । ನಡೆಯುವರೇ ಹಾ ವಿಧಿಯೇ ॥ ಕಡು ಸಂಕಟ । ಒಡಲೊಳಿರಿಸಿ । ಸುಡುವುದೆನ್ನನು । ತಡೆಯಲಾರೆನು ॥ ೧ ॥ ಪರಿ ಕಿಸದೆ ಎನ್ನ ಶುಶ್ರೂಷೆ?। ಜರಿದು ಪಾತಕಿಯೆಂದು ಈಗ ॥ ಚರರಿಂದಲಿ ನೂಕಿ ಸಿದಳು । ಕರುಣವಿನಿತು ಇಡದೆ ಎನ್ನಾ ॥ ೨ ॥ ಧರಣಿಯೊಳಗೆ ತರುಣಿಜನ್ಮ ಇರಲುಬಾರದು ದೇವ ॥ ಕರುಣಿನೆನ್ನನು ಕೈಯ್ಯಬಿಡದೆ । ಪೊರೆಯೊ ಬೇಗ ಸ್ಮರಿಪೆ ನಿನ್ನಾ ॥ ೩ ॥

ಈ ರೀತಿಯಾಗಿ ಅಂಜನಾದೇವಿಯು ಸಂಕಟಪಡುತ್ತಿರಲು ಆಗ ವಸಂತ ಮಾಲೆಯು—ತಾಯಿಯೇ ನಿನಗೆ ಸಂಕಟಪ್ರಾಪ್ತವಾಗಿರುವುದನ್ನು ನೋಡಿ, ನಾನು ನಿನಗಿಂತಲೂ ಇಮ್ಮಡಿಯಾಗಿ ದುಃಖವುಳ್ಳವಳಾಗಿದ್ದೇನೆ ಈ ಗಾಢಾಂಧಕಾರದಲ್ಲಿ ಈ ಘೋರಾರಣ್ಯದಲ್ಲಿರುವ ಕ್ರೂರ ಮೃಗಗಳ ಆರ್ಭಟಗಳಿಗೆ ನೀನು ಭಯಪಡಬೇಡ ಇಗೋ ನೋಡು ನಾನು ಎಚ್ಚರದಿಂದ ನಿನಗೆ ಕಾವಲಾಗಿರುವೆನು ನಿನ್ನ ಪತಿವ್ರತಾಪ್ರಭಾವದಿಂದ ಅವುಗಳೆಲ್ಲಾ ಶಾಂತವಾಗುವುವು. ನೀನು ವ್ಯಸನವನ್ನು ಬಿಡು ಇಗೋ ನೋಡು ಬೆಳಗಿನ ಚಿಹ್ನೆಗಳು ತೋರಿಬರುತ್ತವೆ ಸೂರ್ಯನು ಉದಯಿಸುತ್ತಿದ್ದಾನೆ ಈಗ ಧೈರ್ಯದಿಂದಿರು ಇಲ್ಲಿಗೆ ಸ್ವಲ್ಪ ದೂರದಲ್ಲಿಯೇ ನಿನ್ನ ತವರೂರಾದ ಮಹೇಂದ್ರಪುರಿಯು ಇದೆ ಅಲ್ಲಿಗೆ ಹೋಗಿ ನಿನ್ನ ತಂದೆಗೆ ಚಾರರ ಮೂಲಕ ತಿಳಿಸಿದರೆ ನಿನ್ನನ್ನು ಹೆತ್ತವರಾದ ನಿನ್ನ ತಂದೆತಾಯಿಗಳು ನಿನ್ನನ್ನು ಕಾಪಾಡುವರು ಇನ್ನು ಚಿಂತೆಯನ್ನು ಬಿಡು. ನಡೆ ಹೋಗೋಣವೆಂದು ಅಂಜನಾದೇವಿಯನ್ನು ಕರೆದುಕೊಂಡು ಬರುತ್ತಾ ಮಹೇಂದ್ರಪುರದ ಹೊರಬಾಗಿಲಿಗೆ ಬರಲು ಅಲ್ಲಿದ್ದ ಚಾರರು ತಾಯಿಯೆ ವಂದಿಸುವೆವು ಇವೇನು ನೀನು ತುಂಬಾ ವ್ಯಸನದಿಂದಿರುವೆ ಎಂದು ತೋರುತ್ತದೆ ಇಗೋ ಈ ಸಖಿಯಾದ ವಸಂತೆಯೂ ಬಂದಿರುತ್ತಾಳೆ ಕಾರಣವೇನು ಎನಲು ಆಗ ವಸಂತಮಾಲೆಯು ಚಾರನನ್ನು ಕುರಿತು ಈಕೆಯು ಪತಿಯಿಲ್ಲದ ವೇಳೆಗೆ ಗರ್ಭವತಿಯಾಗಿದ್ದಾಳೆಂದು ಅತ್ತೆಮಾವಂದಿರು ಅರಣ್ಯಕ್ಕೆ ಕಳುಹಿಸಿದರು. ಆದುದರಿಂದ ಇದನ್ನು ನಿಮ್ಮ ರಾಜನಿಗೆ ತಿಳಿಸಿ ಆತನ ಅಪ್ಪಣೆಯ ಪ್ರಕಾರ ಈಕೆಯನ್ನು ಕರೆದುಕೊಂಡು ಹೋಗಿ ಎಂದು ಹೇಳಲು ಆಗ ಚಾರರು ಮಾಹೇಂದ್ರರಾಜನ ಬಳಿಗೆ ಬಂದು ದೊರೆಗೆ ವಂದಿಸಿ ಸ್ವಾಮಿ, ತಮ್ಮ ಪುತ್ರಿಯಾದ ಅಂಜನಾದೇವಿಯನ್ನು ಹನ್ನೆರಡು ವರುಷಗಳಿಂದ ಆವಳ ಪತಿಯಾದ ಪವನಂಜಯನು ನಿಷ್ಕಾರಣವಾಗಿ ಅವಳನ್ನು ನೇರದೆ ತೊರೆದು ವರುಣ ರಾಜನ ಮೇಲೆ ಯುದ್ಧಕ್ಕೆ ಹೊರಟು ಹೋಗಿ, ಆ ದಿನ ರಾತ್ರಿ ಮರಳಿ ಕಾರಣಾಂತರದಿಂದ ತನ್ನ ಪಟ್ಟಣಕ್ಕೆ ಬಂದು ತನ್ನ ಸತಿ ಅಂಜನೆಯ ಅಂತಃಪುರವನ್ನು ಪ್ರವೇಶಿಸಿ ಆ ರಾತ್ರಿ ಅಲ್ಲಿ ಸುರತಸುಖವನ್ನನುಭವಿಸಿ ಯಾರಿಗೂ ಹೇಳದೆ ಮುಖ ತೋರಿಸದೆ ವರುಣನ ಸಮರಕ್ಕೆ ಹೋಗಿರುತ್ತಾನೆ. ಅಂಜನಾದೇವಿಗೆ ಗರ್ಭವಂಕುರಿಸಲು ಈ ವಿಷಯವನ್ನು ಅತ್ತೆಮಾವಂದಿರು

ತಿಳಿದು ಅವಳ ಸಖಿಯಾದ ವಸಂತಮಾಲೆಯೊಡನೆ ಅಂಜನಾದೇವಿಯನ್ನು ಕಾಡಿಗೆ ನೂಕಿಸಿದ್ದಾರೆ ಈಗ ಅವರೀರ್ವರೂ ತುಂಬಾ ವ್ಯಸನಾಕ್ರಾಂತರಾಗಿ ಈ ನಮ್ಮ ಪಟ್ಟಣದ ಹೊರಬಾಗಿಲಲ್ಲಿರುತ್ತಾರೆ ಸನ್ನಿಧಾನದಲ್ಲಿ ಅರಿಕೆ ಮಾಡಿದ್ದೇನೆ ಎಂದು ಹೇಳಲು, ಆಗ ಮಾಹೇಂದ್ರ ರಾಜನು ಹಾ ವಿಧಿಯೇ ಹೆಣ್ಣು ಮಕ್ಕಳಿಲ್ಲವೆಂದು ನಮ್ಮ ರಾಣಿಯು ಇಷ್ಟದೇವತಾ ಪ್ರಸಾದದಿಂದ ಪಡೆದ ಪತಿವ್ರತಾ ಶಿರೋಮಣಿಯಾದ ನನ್ನ ಪುತ್ರಿಗೆ ಈ ದುರವಸ್ಥೆಯು ಪ್ರಾಪ್ತವಾಯಿತೆ ಇನ್ನು ಚಿಂತಿಸಿ ಫಲವೇನು ಅವಳ ಅತ್ತೆ ಮಾವಂದಿರು ಅವಳಲ್ಲಿ ಅಪರಾಧವನ್ನಾರೋಪಿಸಿ ತಿರಸ್ಕರಿಸಿರುವ ಪುತ್ರಿಯನ್ನು ನಾವು ಪಾಲಿಸುವುದುಚಿತವಲ್ಲ. ಅಪಖ್ಯಾತಿಗೆ ಗುರಿಯಾಗುತ್ತೆ—

ಕಂದ—ರಾಗ

ಪತಿಕುಲಕಪಕೀರ್ತಿಯೆನ್ನ। ಸುತೆಯಿಂ ಪ್ರಾಪ್ತಿಸಿತು ಮತ್ತೆನ್ನ ಅನ್ವಯಕ್ಕಿದು ॥ ಕ್ಷಿತಿಯೋಳ್ ನೈಜಂಜಾತೆಯ। ಮತಿವಂತರು ಇತ್ತ ಬಳಿಕ ಕುಲಕಿಲ್ಲವೆಂಬರ್ ॥

ಚಾರನೆ ನನ್ನ ಕುಮಾರಿಯನ್ನು ಈ ನಗರದ ಎಲ್ಲೆಯಿಂದ ದೂರಮಾಡು ಒಂದು ಕ್ಷಣವೂ ನಾವಕಾಶ ಮಾಡಕೂಡದು ಎಂದು ದೊರೆಯು ಆಜ್ಞೆ ಮಾಡಲು ರಾಣಿಯಾದ ಮನೋವೇಗೆಯು ಈ ಸಮಾಚಾರವನ್ನು ಕೇಳಿ, ತಿಳಿದು ಅತಿ ದುಃಖದಿಂದ ಮಗಳ ಮುಖವನ್ನು ನೋಡಬೇಕೆಂದು ಬಂದು ಹಾ ಪುತ್ರಿಯೇ ಮುಂದೇನು ಗತಿ—

ರಾಗ—ನಾದನಾಮಕ್ರಿಯೆ—ರೂಪಕತಾಳ—

ಸುತೆಯೆ ನಿನ್ನನಗಲಿ ನಾನು। ಕ್ಷಿತಿಯೊಳೆಂತು ಬಾಳ್ವೆನಾ ಹಾ॥ ಸತಿಶೀಲೆಯೆ ಬಲುಕಾಡಿಗೆ। ಪಿತನೆ ಬೀಳ್ಕೊಟ್ಟನೆ ಹಾ ॥೧॥ ಅವಮತಿಯೊಳ ವಿಚಾರಿಯೆಂದು। ಕುವರಿಯನ್ನು ವನಕೆ ನೂಕೀ। ವಿವಿಧಾಪತ್ತಿಗೆಡೆ ಮಾಡಿರೆ। ಭುವಿಯೊಳೆಂತು ಜೀವಿಸಲೀ ॥೨॥ ಸುಗಣೆಯೆಂದು ಮನಕೆ ತಿಳಿದೇ। ಮಗಳನ್ನಳಿಯ ಬರುವತನಕ। ಬಿಗೆ ತಾಳದೆ ಮೊಗನೋಡದೆ। ಬಗೆಯುದೆಂತು ಸೈಪ ಹಾ ಹಾ ॥೩॥

ಹಾ ಪುತ್ರಿಯೇ ನನಗೆ ನೂರು ಮಂದಿ ಗಂಡುಮಕ್ಕಳಿದ್ದರೂ ಇಷ್ಟದೇವತಾ ಪ್ರಾರ್ಥನೆಯಿಂದ ನಿನ್ನೊರ್ವ ಸುಕುಮಾರಿಯನ್ನು ಪಡೆದು ಅತಿ

ಸಂತೋಷದಲ್ಲಿದ್ದ ನನಗೆ ಈ ದುರವಸ್ಥೆಯನ್ನು ನೋಡಲು ಪ್ರಾಪ್ತವಾಯಿತೆ ನೀನು ಆ ಘೋರವಾದ ಕಾಡಿನ ಮಧ್ಯದಲ್ಲಿ ಆ ಕ್ರೂರ ಮೃಗಗಳ ಹಾವಳಿಯಿಂದ ಹೇಗೆ ಜೀವಿಸುವೆ ನಿನ್ನ ಅತ್ತೆಮಾವಂದಿರಿಗೆ ತನ್ನ ಮಗನು ಬರುವವರೆಗೂ ತಡೆಯಬಾರದಾಗಿತ್ತೇ ಅನ್ಯಾಯವಾಗಿ ನಿನ್ನನ್ನು ಈ ದುರವಸ್ಥೆಗೆ ಗುರಿಮಾಡಿದರೆ, ಹಾ ದೈವವೇ ಮುಂದೇನು ಗತಿಯೆಂದು ಪ್ರಲಾಪಿಸುತ್ತಾ ದುಃಖಿಸುತ್ತಿರಲು ಮನೋವೇಗೆಯ ಸಖಿಯು ಎಲೆ ಮಹಾರಾಣಿಯೆ ನಿನ್ನ ದುಃಖವು ವ್ಯರ್ಥವಾದದ್ದು ಮಹಾರಾಜನು ನಿಯಮಿಸಿದ ಶಾಸನವನ್ನು ತಪ್ಪಿಸಲಿಕ್ಕೆ ಯಾರು ಸಮರ್ಥರು? ಆ ನಿನ್ನ ಕುವರೀಮಣಿಯ ಪ್ರಭಾವವೇ ಆಕೆಯನ್ನು ಕಾಪಾಡುವುದು ಇನ್ನು ಮಾಡತಕ್ಕದ್ದೇನು ಈ ವ್ಯಸನ ಬಿಡು ನಡೆ ಹೋಗೋಣ ವಿಧಿಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ ಎಂದು ಸಖಿಯೂ ಮನೋವೇಗೆಯೂ ಅರಮನೆಗೆ ಹೊರಟು ಹೋಗಲು, ಇತ್ತ ಅಂಜನೆಯು ತನ್ನ ಸಖಿಯೊಡನೆ ಅರಣ್ಯಕ್ಕೆ ಹೊರಟು ಬಂದು ಹಾ ವಿಧಿಯೇ ನನ್ನ ಪೂರ್ವಾರ್ಜಿತಪಾಪ ಕರ್ಮವು ಎಷ್ಟು ದುರ್ಗಟನಾಗಿರುವುದು ನನ್ನನ್ನು ಹೆತ್ತ ತಂದೆತಾಯಿಗಳೂ ನನ್ನನ್ನು ಪಾಲಿಸದೆ ಕಾಡುಪಾಲು ಮಾಡಿದರೇ ಎಂದು ಅಂಜನೆಯು ದುಃಖಿಸುತ್ತ

ರಾಗ—ಕಾನಡ

ಅಡಿಯಿಡಲಾರೆನೇ। ಸುಡುತಿದೆ ಭೂಮಿಯು। ಅಡವಿಯೊಳ್ ಚರಿಸಲು। ಕಡು ಸಂಕಟವಕಟ ॥೧॥ ಕಲ್ಲುಮುಳ್ಳನು ತುಳಿಯೆ। ನಿಲ್ಲಲಾರದೆ ನಾನು। ತಲ್ಲಣಿಸುವೆನೆ ಹಾ। ಎಲ್ಲಿಗೆ ಪೋಗಲಿ ॥೨॥ ಹಸಿವು ತೃಷೆಯನು। ಬಿಸಿಲ ಬೇಗೆಯನು ಸ। ಹಿಸನು ಸಖಿಯೆ ನಾನು। ವಶಳಾದೆ ಕಷ್ಟಕೇ ॥೩॥ ಅತ್ತೆಮಾವಂದಿರು। ಪೆತ್ತ ಜನಕ ಸಹ। ಇತ್ತ ನೂಕಿದರೆನ್ನಾ। ನೆತ್ತಪೋಗಲಿ ಈಗ ॥೪॥ ದೇವರ ದೇವನೇ। ಭಾವಜ ವಿಜಯನೆ। ಪಾವನಮೂರ್ತಿಯೇ। ಕಾಯ್ವುದು ಯೆನ್ನನೇ ॥೫॥

ಅಂಜನಾದೇವಿಯು ಪ್ರಲಾಪಿಸಿ ಮೂರ್ಛಾಕ್ರಾಂತಳಾಗಲು ಆಗ ಸಖಿಯು ತಣ್ಣೀರನ್ನು ಸೇಚಿಸಿ ತಳಿರುಗಳಿಂದ ಗಾಳಿಯನ್ನು ಬೀಸಿ ಶೈತ್ಯೋಪಚಾರ ಮಾಡಲು ಅಂಜನೆಯು ಮೂರ್ಛೆಯಿಂದ ಎಚ್ಚತ್ತು ಹಾ ಪ್ರಾಣಕಾಂತನೇ ನಿನ್ನ ಸಮೀಪವನ್ನು ಬಿಟ್ಟಿದ್ದರಿಂದ ಇಂಥಾ ಕಷ್ಟ ದಶೆಯು ನನಗೆ ಪ್ರಾಪ್ತವಾ

ಯಿತು ಹಾ ನಾಥನೆ ಬೇಗ ಬಂದು ನನ್ನನ್ನು ಕಾಪಾಡಬಾರದೆ—

ರಾಗ ಹಿಂದೂಸ್ತಾನಿಕಾಪಿ–ರೂಪಕತಾಳ—

ವೀರಸಾರ| ಧುರಧೀರ| ಸಂಹಾರ| ಹಾ ಹಾ ||ಪಲ್ಲ|| ನಾಥನೆ ನಿನ್ನಯ| ಮಾತೆಯೂ ಮಾಡಿದ| ರೀತಿಯಿಂ ನೊಂದೇ| ಕಾಂತಶಾಂತ ||೧|| ನೀರಸ ಕಾಣದೆ| ಚಾರು ಮುಖೇಂದುವ| ಮೀರಿದ ಕಷ್ಟ| ಪಾರವಾರ ||೨|| ಆರ್ಯ ಸುಪುತ್ರನೆ| ಭಾರ್ಯೆ ವಿಪತ್ತನು| ತ್ವರ್‍ಯದಿ ನೀಗುನೀ| ಶೌರ್‍ಯವರ್‍ಯ ||೩||

ಹಾ ಆರ್ಯಪುತ್ರನೆ ನೀನು ಯಾವಾಗ ಬಂದು ನನ್ನನ್ನು ಕಾಪಾಡ ತ್ತೀಯೋ ಗರ್ಭವತಿಯಾಗಿ ಕಾಡುಪಾಲಾಗಿದ್ಯಾಗ್ಯೂ, ಜಗದೀಶನಿಗೂ ಕೃಪೆ ಬಾರದೆ ಎಂದು ದುಃಖಿಸುತ್ತಿರಲು ಸಖಿಯು ಅಂಜನೆಯೆ ಈ ದುಃಖವನ್ನು ಬಿಡು ಇಗೋ ನೋಡು, ಪತಿವ್ರತಾ ಮಹಿಮೆಯು ಬಹುಶ್ಲಾಘನೀಯವಾದುದು ಆದುದರಿಂದಲೇ ದುಷ್ಟಮೃಗಗಳೆಲ್ಲಾ ಪರಸ್ಪರ ವೈರವನ್ನು ಬಿಟ್ಟು ಮೇವನ್ನು ಮರೆತಿವೆ ಇದು ಹಾಗಿರಲಿ, ಇಗೋ ನೋಡು ಸಮೀಪದಲ್ಲಿರುವ ಈ ಪರ್ವತವು ಎಷ್ಟು ಮನೋಹರವಾಗಿದೆ. ಅಲ್ಲಿಯೇನಾದರೂ ವಿಶೇಷವಿರಬಹುದು ಹೋಗೋಣ ಬಾ ಎಂದು ಆ ಪರ್ವತದ ಬಳಿಗೆ ಹೋಗಿ ಮುನಿಶ್ರೇಷ್ಠರನ್ನು ಕಂಡು ಅವರ ಪಾದಗಳಿಗೆ ನಮಸ್ಕರಿಸಿ

ರಾಗ–ಕಾನಡ—

ಮುನಿವರ ಪಾಲಿಸು| ವಿನಯದಿಂ ಬೇಡುವೆ| ಘನಮಹಿಮನೆ ಎಮ್ಮ ಮನದನು ತಾಪವ ||೧|| ಘೋರ ಕಾನನದೊಳೀ| ನಾರಿಯರೀರ್ವರ| ಮೀರಿದ ಕಷ್ಟವ| ಪಾರುಮಾಡಿಸು ಬೇಗ ||೨|| ನಮಿಸುವೆ ನಿಮ್ಮಯ| ವಿಮಲ ಪಾದಂಗಳಿಗೆ| ಕ್ಷಮಿಸುತೆ ಎಮ್ಮಯ| ಶ್ರಮವನು ಹರಿಸು ||೩||

ಮುನಿಶ್ರೇಷ್ಠರೇ ನಮ್ಮನ್ನು ಕಾಪಾಡಬೇಕೆಂದು ನಮಸ್ಕಾರ ಮಾಡಲು ಆಗ ಯತಿಶ್ರೇಷ್ಠರು ಅವರಿಗೆ ಆಶೀರ್ವಾದ ಮಾಡಿ ಅಬಲೆಯರಿರಾ, ನೀವು ಬಹು ಬಳಲಿದ್ದೀರಿ. ನಿಮ್ಮ ಕಷ್ಟವು ಕೂಡಲೆ ನಿವಾರಣೆಯಾಗುವುದು ಚಿಂತಿಸಬೇಡಿರಿ ಎನಲು ವಸಂತಮಾಲೆಯು ಸ್ವಾಮಿ ಮುನೀಂದ್ರರೆ! ನಮ್ಮ ರಾಣಿಗೆ ಈ ವಿಪತ್ತು ಏನು ಕಾರಣ ಸಂಭವಿಸಿತು ದಯವಿಟ್ಟು ಅಪ್ಪಣೆಯಾಗಬೇಕು ಎನಲು ಆಗ ಮುನಿಯು ಅವರನ್ನು ಕುರಿತು, ಪೂರ್ವ ಜನ್ಮದಲ್ಲಿ ಲಕ್ಷ್ಮಿಯೆಂತಲೂ ಈಕೆಯ ಸವತಿ ಕನಕೋದರಿಯೆಂತಲೂ ಈ ಇಬ್ಬರು ರಾಜ

ಪುತ್ರಿಯರಲ್ಲಿ ಕಿರಿಯವಳಾದ ಕನಕೋದರಿಯು ಹಿರಿಯವಳಾದ ಲಕ್ಷ್ಮಿಯು ಪೂಜೆ ದರ್ಶನ ಮಾಡುತಿದ್ದ ಜಿನದೇವರ ಬಿಂಬವನ್ನು ಇದರ ದೆಶೆಯಿಂದ ಪ್ರತಿ ದಿವಸವೂ ಭೋಜನವು ಕಾಲಾತೀತವಾಗುತ್ತೆಂದು ಬೇರೆ ಕಡೆ ಬಚ್ಚಿಡಲು ಅಕ್ಕನು ಅದನ್ನು ದರ್ಶನ ಮಾಡುವವರೆಗೂ ಊಟ ಮಾಡುವುದಿಲ್ಲವೆಂದು ವ್ರತ ಮಾಡಲು ಕಿರಿಯವಳಾದ ಕನಕೋದರಿಯು ಹೆದರಿ ಆ ಬಿಂಬವನ್ನು ತಂದು ಕೊಡುವವರೆಗೆ ಹನ್ನೆರಡು ಘಳಿಗೆಗಳು ಕಾಲ ಅತೀತವಾಯಿತು ಆ ಜನ್ಮದ ಕನಕೋದರಿಯೇ ಈ ಜನ್ಮದಲ್ಲಿ ಈ ಅಂಜನಾದೇವಿಯೆಂದು ಹೆಸರನ್ನು ಪಡೆದಿರುವ ಈಕೆಗೆ ಈ ಭವದಲ್ಲಿ ಹನ್ನೆರಡು ವರ್ಷಗಳು ಆ ದೋಷದಿಂದ ಪತಿಯು ತೊರೆದು ತಂದೆತಾಯಿಗಳೂ ಬಂಧುಗಳೂ ತೊರೆದರು ಆ ಪಾಪಶೇಷವು ಕಳೆಯುತ್ತಾ ಬಂದಿದೆ ಇಲ್ಲಿಂದ ಮುಂದೆ ಈ ಅಂಜನೆಯಲ್ಲಿ ಪುಣ್ಯ ಪುರುಷನೂ, ಪರಾಕ್ರಮಶಾಲಿಯೂ, ಲೋಕಖ್ಯಾತನೂ, ಸ್ಫುರದ್ರೂಪಿಯೂ ಆದ ಪುತ್ರನು ಉದಯಿಸುವನು. ಅನಂತರ ಸಕಲ ಕಷ್ಟನಿವಾರಣೆಯಾಗಿ ಸರ್ವರೂ ಆನಂದಿಸಿ ಸುಖವಾಗುವುದು ಎನಲು ಆಗ ವಸಂತಮಾಲೆಯು ಕೇಳಿ ಸಂತೋಷಪಟ್ಟು ಸ್ವಾಮಿ ಈಗ ಈ ಅರಣ್ಯದಲ್ಲಿ ಕ್ರೂರಮೃಗಗಳ ಭೀತಿಯಿಂದ ನಾವು ಜೀವಿಸುವುದು ಹೇಗೆ ಅದಕ್ಕುಪಾಯವೇನು ಅಪ್ಪಣೆಯಾಗಬೇಕು ಎನಲು ಆಗ ಮುನಿಶ್ರೇಷ್ಠರು–ಅಬಲೆಯರಿರಾ ಈ ಗುಹೆಗೆ ಮಂತ್ರಪ್ರೋಕ್ಷಣೆ ಮಾಡಿರುವುದರಿಂದ ಯಾವ ಭಯವೂ ಪಡಬೇಕಾಗಿಲ್ಲ. ಆದ್ದರಿಂದ ಧೈರ್ಯವಾಗಿ ಇಲ್ಲಿರಿಯೆಂದು ಹೇಳಿ ತಾನು ಬೇರೆ ಕಾಡಿಗೆ ಹೊರಟು ಹೋಗಲು ಕೆಲವು ದಿವಸಗಳು ಕಳೆದ ನಂತರ ಅಂಜನೆಯು ಸಖಿಯನ್ನು ಕುರಿತು ಈ ರಾತ್ರಿ ಬಹು ಗಾಢಾಂಧಕಾರವಾಗಿರುವುದು, ಇದರಿಂದ ಅತಿ ಭಯಂಕರವಾಗಿ ತೋರುವುದು. ಕ್ರೂರ ಮೃಗಗಳ ಧ್ವನಿಯನ್ನು ಕೇಳಿ ನನ್ನ ಹೃದಯವು ಕಂಪಿಸುವುದು ಅಯ್ಯೋ ಇನ್ನೇನು ಗತಿ ಎನಲು ಆಗ ಆ ಸಖಿಯು ನಿಜ ಈ ಭಯದಿಂದ ಮಾತನಾಡಲಿಕ್ಕೂ ನಾಲಿಗೆಯು ಹಿಂದಕ್ಕೆಳೆಯುವುದು. ಅಯ್ಯೋ ಮುನಿಶ್ರೇಷ್ಠರು ಈ ಗುಹೆಗೆ ಮಂತ್ರಿಸಿದ್ದೇವೆಂದೂ ಭಯವಿಲ್ಲವೆಂದೂ ಹೇಳಿದ ಮಾತು ನಿಜವಾಗಿತ್ತು ನಾವು ಅಬಲೆಯರಾದ್ದರಿಂದ ಚಿತ್ತವು ಕಂಪಿಸುವುದು ಮುನಿಗಳ ಮಾತು ಎಂದಿಗೂ ತಪ್ಪುವುದಿಲ್ಲ ಎನ್ನುವಷ್ಟರಲ್ಲಿಯೇ ಒಂದು ಸಿಂಹವು ಬರಲು ಆಗ

ಅಂಜನೆಯು ಸಖಿಯೆ ಸಿಂಹವು ಈ ಗುಹೆಯ ಸಮೀಪಕ್ಕೆ ಬರುತ್ತಿದೆ. ಇನ್ನೇನು ಗತಿ ಎಂದು ದುಃಖದಿಂದ—

ಹಾ ವಿಧಿಯೇ। ಈ ರೀತಿ ಗೈದೆಯಾ ॥ಪಲ್ಲ॥ ಕ್ರೂರ ಮೃಗೇಂದ್ರವು।ಭೂರಿ ಘರ್ಜಿಸುತ್ತಲಿ। ದ್ವಾರ ಸಮೀಪದೊಳ್। ಸಾರುತೆ ಬರುವುದು ॥೧॥ ಪತಿಯೆ ನಿನ್ನನಗಲಿನಾಂ। ವ್ಯಥೆಯೊಳು ಬಳಲುತೆ, ಹತಭಾಗ್ಯಳಾದೆನು ॥ ಗತಿಯೇನು ಮುಂದೆ ಹಾ ॥೨॥ ಮುನಿವರ ನೆನಗಿದ। ಘಗಮಂತ್ರ ಮಹಿ ಮೆಯು। ಅನುವು ತಪ್ಪಿದ ಮೇಲೆ। ಘನಕಷ್ಟವದಗಿತು ॥೩॥

ಎಂದು ಪ್ರಲಾಪಿಸುತ್ತಿರಲು ಸಖಿಯು ತಾಯೆಯೇ ಹೆದರಬೇಡ ಮಹಾ ಮುನೀಶ್ವರರು ಆಡಿದ ನುಡಿಯು ಎಂದಿಗೆ ತಪ್ಪೀತು ಇದು ನಿನ್ನ ಪಾಪಶೇಷವೆಂದು ತಿಳಿದುಕೋ ಒಂದು ವೇಳೆ ಈ ಸಿಂಹವು ಮಾರಿ ಭಕ್ಷಿಸಲಿಕ್ಕೆ ಬಂದರೆ ನಿನಗೆ ಅಪಾಯುಬಾರದಂತೆ ನನ್ನ ದೇಹವನ್ನೇ ಅದಕ್ಕೆ ಆಹಾರವಾಗಿ ಒಪ್ಪಿಸುವೆನು ಭಯಪಡಬೇಡ ಎಂದು ಹೇಳಿ ಸಮಾಧಾನ ಮಾಡುತ್ತಿರುವಷ್ಟರಲ್ಲಿಯೇ ಗುಹೆಯ ಸಮೀಪಕ್ಕೆ ಬಂದು ಅರ್ಭಟಿಸಲು ಆಗ ಆ ಸಖಿಯು ಆಪದ್ಬಾಂಧವ ಅನಾಥರಕ್ಷಕ ಥಯಾನಿಧಿ ಸುರನರಾದಿಗಳೇ ವನದೇವಿಯೇ ಶಿಶುವಿನ ಪುಣ್ಯ ದೇವತೆಯೇ, ಯಾರಾದರೂ ಈ ಗರ್ಭಿಣಿಯನ್ನು ಕಾಪಾಡಬಾರದೆ ಹಾ ಅಕಟ ಎಂದು ಮೊರೆಯಿಟ್ಟು ಕೂಗಿಕೊಳ್ಳಲು ಅಂತರಿಕ್ಷದಲ್ಲಿ ವಿಮಾನಾರೂಢರಾಗಿ ಹೋಗುತ್ತಿದ್ದ ಮಣಿಚೂಲ ದೇವನೂ ರತ್ನಚೂಲ ದೇವಿಯೂ ಈ ಆರ್ತ ಧ್ವನಿಯನ್ನು ಕೇಳಿ ಆ ಮಣಿಚೂಲ ದೇವನು ಆ ಕ್ಷಣವೇ ಶರಭಾಕೃತಿಯನ್ನು ತಾಳಿಕೊಂಡು ಸಿಂಹವನ್ನು ಓಡಿಸುವುದಕ್ಕಾಗಿ ಬರಲು ಆಗ ವಸಂತಮಾಲೆಯು ಈ ಸಿಂಹವೂ ಅಲ್ಲದೆ ಶರಭವೂ ಬಂದಿತಲ್ಲಾ ಏನು ಮಾಡುವುದು ಅತಿ ಭಯವಾಗುತ್ತಿದೆಯಲ್ಲಾ ಎನ್ನುವಷ್ಟರಲ್ಲಿಯೇ ಸಿಂಹವು ಓಡಿಹೋದದ್ದನ್ನು ಕಂಡು ಸಖಿಯೇ ಶರಭವು ಸಿಂಹವನ್ನು ಓಡಿಸಿತು ಇದೇನಾಶ್ಚರ್ಯ ಶರಭವೂ ಮಾಯವಾಯಿತು ಇನ್ನು ಧೈರ್ಯವಾಯಿತು ಅನ್ನುವಷ್ಟರಲ್ಲಿ ಆ ಗಂಧರ್ವರು ತಮ್ಮ ದಿವ್ಯರೂಪಿನಿಂದ ಬಂದು ಅವರಿಗೆ ಕಾಣಿಸಿಕೊಳ್ಳಲು, ಸಖಿಯು ಈ ಮಹಾನುಭಾವರಿಂದಲೇ ಈ ಉಪಸರ್ಗವು ಪರಿಹಾರವಾಗಿರುವುದೇ ನಿಜವಾದದ್ದು ಅನ್ನಲು ಗಂಧರ್ವ ಸ್ತ್ರೀಯಾದ ರತ್ನಚೂಲ ದೇವಿಯು ಅಂಜನೆಗೆ ವಂದಿಸಿ ನೀವು ಸುಖವಾಗಿರಿ ನಿಮ್ಮ ಆರ್ತ

ಧ್ವನಿಯನ್ನು ಕೇಳಿ ಸೈರಿಸಲಾರದೆ ನನ್ನ ಪತಿಯು ಶರಭಾಕೃತಿಯನ್ನು ತಾಳಿ ಸಿಂಹವನ್ನು ಓಡಿಸಿದನು ನಾವು ಗಂಧರ್ವರು ನಾವು ನಮ್ಮ ಲೋಕಕ್ಕೆ ಹೋಗುತ್ತೇವೆ ಎಂದು ಹೇಳಿ ಅವರು ಅದೃಶ್ಯರಾದರು. ಅಂಜನೆಯು ಸಖೀ ನಿನ್ನ ಮಾತೇ ನಿಜ ಈಗ ನನಗೆ ಸ್ವಲ್ಪ ಧೈರ್ಯವಾಯಿತು ಅಷ್ಟರಲ್ಲಿಯೇ ಅಂಜನಾದೇವಿಗೆ ಪ್ರಸವ ವೇದನೆಯು ತೋರಲು—

ಮಂಗಳ ದಿನದ ಮಧ್ಯಮ ರಾತ್ರಿಯೊಳ್। ಕಂಗೊಳಿಸುತ್ತಿರೆ ತಾರೆಗಳು॥
ಅಂಗನೆ ಅಂಜನೆಯು ದರದಿ ಜನಿಸಿದ। ತುಂಗ ಪರಾಕ್ರಮಿ ಹಣುಮಹನು॥

ಶುಭ ದಿವಸ ಅಂಜನೆಯು ಸ್ಫುರದ್ರೂಪಿಯಾದ ಗಂಡು ಮಗುವನ್ನು ಹೆತ್ತಳು. ಈ ಪುಣ್ಯ ಪುರುಷ ಶಿಶುವು ಹುಟ್ಟಿದ್ದರಿಂದ ಆ ಗುಹೆಯಲ್ಲಿದ್ದ ಕತ್ತಲೆಯೆಲ್ಲಾ ಹೋಗಿ ಸೂರ್ಯೋದಯವಾದಂತೆ ಬೆಳಕಾಗಿ ಪ್ರಕಾಶಿಸುತ್ತಿದೆ ಸಖಿಯ ಎ ಅಂಜನೆಯೇ ನಿನ್ನ ಈ ಶಿಶುವಿನ ಶರೀರಕಾಂತಿಯಿಂದ ಈ ಗುಹೆಯಲ್ಲಿ ಆವರಿಸಿದ್ದ ಕತ್ತಲೆಯು ಹೋಗಿ ಬೆಳಕಾಗಿರುತ್ತದೆ ನೋಡು ನಿನ್ನ ಕುವರನಿಗೆ ರಾಜಚಿನ್ಹೆಗಳು ಇರುತ್ತವೆ. ಯತೀಂದ್ರರು ಹೇಳಿದ ಮಾತು ಎಂದಿಗೂ ಸುಳ್ಳಲ್ಲ ಇನ್ನು ನೀನು ಚಿಂತೆಯನ್ನು ಬಿಡು ಎಂದು ಅವಳಿಗೆ ಉಪಚಾರಗಳನ್ನು ಮಾಡುತ್ತಿರಲು ಅಷ್ಟರಲ್ಲಿಯೇ ಅನುರಹದ್ವೀಪದ ಶ್ರೀಪುರಾಧೀಸ್ವರನಾದ ಪ್ರತಿರವಿಖೇಚರನು—

ಪ್ರತಿರವಿಖೇಚರನಭದ ಮಾರ್ಗದೊಳು। ಅತಿತ್ವರೆಯಿಂದಲಿ ಬರುತಿರಲು॥
ಗತಿಸದೆ ತನ್ನ ವಿಮಾನವು ನಿಲ್ಲಲು। ಅತಿಶಯವೇನೆಂದು ಚಿಂತಿಸಿ॥

ಪ್ರತಿರವಿಖೇಚರನು ಅಂತರಿಕ್ಷ ಮಾರ್ಗದಲ್ಲಿ ತನ್ನ ವಿಮಾನಾರೂಢನಾಗಿ. ಬರುತಿದ್ದ ವಿಮಾನವು ಇವರಿರುವ ಸ್ಥಳದಲ್ಲಿ ಮುಂದಕ್ಕೆ ಚಲಿಸದೆ ನಿಲ್ಲಲು ಇದಕ್ಕೇನು ಕಾರಣವೆಂದು ಚಿಂತಿಸಿ, ಏನು ಆಶ್ಚರ್ಯವಿದೆಯೋ ಭೂಮಿಗೆ ಇಳಿದು ಪರೀಕ್ಷಿಸಬೇಕೆಂದು ಕೆಳಕ್ಕೆ ಇಳಿದು ಬಂದು ನೋಡಿ, ಇದೇನು ಇಬ್ಬರು ಸ್ತ್ರೀಯರಿದ್ದಾರೆ ಇವರನ್ನು ನೋಡಿದ ಮಾತ್ರದಿಂದ ನನ್ನ ಮನಸ್ಸು ಕರಗುವುದು ಆದುದರಿಂದ ಈ ಅಬಲೆಯರು ನನ್ನ ಸಂಬಂಧದವರಾಗಿರಬೇಕು. ಹತ್ತಿರ ಹೋಗಿ ನೋಡುವೆನೆಂದು ಗುಹೆಯ ಸಮೀಪಕ್ಕೆ ಬರಲು ವಸಂತೆಯು ಅಂಜನೆಯೇ ಅಬಲೆಯರಿರುವ ಸ್ಥಳಕ್ಕೆ ಓರ್ವ ಪುರುಷನು ಧೈರ್ಯವಾಗಿ ಮಾತನಾಡುತ್ತಾ ಬಂದಿದ್ದಾನೆ ಎಂದು ಎಲೈ ನೀನಾರು ದೂರ ನಿಲ್ಲು ಎಂದು

ಹೇಳಲು ಆಗ ಆ ಪ್ರತಿರವಿಖೇಚರನು ಸಖಿಯನ್ನು ಕುರಿತು ಅಬಲೆಯರಿರಾ ಅಂಜಬೇಡಿ ನಾನು ಅಂತರಿಕ್ಷ ಮಾರ್ಗದಲ್ಲಿ ವಿಮಾನಾರೂಢನಾಗಿ ಬರುತ್ತಿರುವಾಗ ವಿಮಾನವು ಚಲಿಸದೆ ನಿಲ್ಲಲು ಇಲ್ಲಿ ಏನು ಆಶ್ಚರ್ಯ ನೋಡೋಣವೆಂದು ಇಳಿದು ಬಂದು ನಿಮ್ಮನ್ನು ನೋಡಲು ನನ್ನ ಮನಸ್ಸು ಬಹಳವಾಗಿ ಕರಗುವುದು ಆದುದರಿಂದ ನೀವು ಯಾರು, ಈ ಮಗು ಯಾವುದು, ಈ ಅರಣ್ಯದಲ್ಲಿರಲು ಕಾರಣವೇನು ವಿಸ್ತರಿಸಿ ಹೇಳು ಎನಲು, ಆಗ ವಸಂತಮಾಲಿನಿಯು ಪ್ರತಿರವಿಖೇಚರನನ್ನು ಕುರಿತು ಎಲೈ ಆರ್ಯನೆ ನಿನ್ನ ಮುಖವನ್ನು ನೋಡಿದರೆ ಆಪ್ತ ಬಂಧುವನ್ನು ನೋಡಿದಂತೆ ತೋರುತ್ತೆ. ನಿನ್ನ ರೀತಿಯನ್ನು ತಿಳಿಸಿದರೆ ನಮ್ಮ ವೃತ್ತಾಂತವನ್ನು ಹೇಳಲೇನೂ ಅಭ್ಯಂತರವಿಲ್ಲ ಎನಲು ಆಗ ಆ ಪ್ರತಿರವಿಯು—ಎಲೈ ಅಬಲೆಯೆ ನಾನು ಅನುರಹ ದೀಪದಲ್ಲಿ ಶ್ರೀಪುರದಲ್ಲಿ ವಿಚಿತ್ರಸೂರ್ಯನಿಗೂ ಅವನ ಪತ್ನಿ ಸೌಂದರಿಗೂ ಜನಿಸಿದ ಪುತ್ರ ನನ್ನ ಹೆಸರು ಪ್ರತಿರವಿಯು ನಾನು ಅಂಗವೀಚಿಗಳೆಂಬ ಕೇವಲಿಗಳ ಪೂಜಾದರ್ಶನಾದಿಗಳನ್ನು ಮಾಡಿ ಬರುವ ಕಾಲದಲ್ಲಿ ನಿಮ್ಮ ಕಾರಣದಿಂದ ಇಲ್ಲಿ ವಿಮಾನವು ನಿಲ್ಲಲು ನೋಡೋಣವೆಂದು ಇಲ್ಲಿಗೆ ಬಂದೆನು ಇದೇ ನನ್ನ ವೃತ್ತಾಂತವು- ಇನ್ನಾದರೂ ನಿಮ್ಮ ವೃತ್ತಾಂತವನ್ನು ಹೇಳಬಹುದಷ್ಟೆ ಎಂದು ಹೇಳಲು ಆಗ ವಸಂತೆಯು ಈ ನಮ್ಮ ರಾಣಿಯು ಮಹೇಂದ್ರ ಪುರದ ದೊರೆಯಾದ ಮಾಹೇಂದ್ರನೆಂಬ ಖೇಚರನಿಗೂ ಆತನ ಪತ್ನಿ ಮನೋವೇಗೆಗೂ ಸುತೆಯಾದ ಅಂಜನಾದೇವಿಯು, ಈಕೆಯನ್ನು ಆದಿತ್ಯಪುರದ ದೊರೆಯಾದ ಪ್ರಹ್ಲಾದಖೇಚರನ ಕುಮಾರ ವಾಯಕುಮಾರನು ವಿವಾಹವಾಗಿ ಅಲ್ಲಿಂದ ಹನ್ನೆರಡು ವರ್ಷಗಳು ತನ್ನ ಪತ್ನಿಯಾದ ಈ ಅಂಜನೆಯನ್ನು ತೊರೆದು ವರುಣನ ಸಮರಕ್ಕೆ ಹೋದ ದಿನದ ರಾತ್ರಿಯಲ್ಲಿ ತನ್ನ ಪತ್ನಿಯನ್ನು ನೆನೆದು ಬಂದು ಸುರತ ಸುಖವನ್ನು ಅನುಭವಿಸಿ ತಾನು ಬಂದ ಸಮಾಚಾರವನ್ನು ಯಾರಿಗೂ ತಿಳಿಸದೆ ಮತ್ತು ಕಾಣಿಸಿಕೊಳ್ಳದೆ ಬೆಳಗಾಗುವುದರೊಳಗಾಗಿಯೇ ಯುದ್ಧಕ್ಕೆ ಹೊರಟುಹೋದನು. ಕೂಡಲೇ ಈಕೆಯು ಗರ್ಭಿಣಿಯಾದುದರಿಂದ ಈಕೆಯ ಅತ್ತೆಮಾವಂದಿರು ಅರಣ್ಯಕ್ಕೆ ನೂಕಿದರು ಅಲ್ಲಿಂದೀಕೆಯು ತಂದೆಯ ಪಟ್ಟಣಕ್ಕೆ ಹೋಗಲು ಅವರೂ ಸೇರಿಸದೆ ಬಿಟ್ಟರು. ನಾನೇ ವಸಂತಮಾಲೆಯೆಂಬ ಸಖಿಯು ಈಕೆಯೊಡನೆ ಈ ಗುಹೆಯನ್ನು ಸೇರಿದೆನು. ಇಲ್ಲಿ ಈ ಮಗುವು ಜನಿಸಿತು, ಎನಲು

ಆಗ ಪ್ರತಿರವಿಯು ವಸಂತೆಯೇ ಈ ಅಂಜನೆಯ ಸೋದರ ಮಾವನೇ ನಾನು ಇನ್ನು ಚಿಂತೆಯನ್ನು ಬಿಡು, ಎನಲು ಆಗ ಅಂಜನೆಯು ಸಂತೋಷದಿಂದ ಮಾವನಿಗೆ ವಂದಿಸಲು ಪ್ರತಿರವಿಯು ಆಶೀರ್ವದಿಸಿ ನಿನ್ನ ಸುತ ಸಖಿಯರೊಡನೆ ವಿಮಾನದಲ್ಲಿ ಕುಳಿತುಕೋ ಶ್ರೀಪುರಕ್ಕೆ ಹೋಗೋಣ—

ಪ್ರತಿರವಿಖೇಚರ ಸೊಸೆ ಅಂಜನೆಯ। ಸುತಸಖಿವೆರಸಿ ವಿಮಾನದೊಳು।
ಅತಿಜವದೀ ತನ್ನ ಶ್ರೀಪುರವರಕೆ। ಗತಿಸಿದನುನಭಮಾರ್ಗದೊಳು॥

ಎಂದು ಅವರುಗಳನ್ನು ತನ್ನ ವಿಮಾನದಲ್ಲಿ ಕೂರಿಸಿಕೊಂಡು ಅಂತರಿಕ್ಷ ಮಾರ್ಗದಲ್ಲಿ ಹೊರಟು ಬಂದು ತನ್ನ ಪಟ್ಟಣವಾದ ಶ್ರೀಪುರಕ್ಕೆ ಬರುತ್ತಿರುವಾಗ ವಿಮಾನದಿಂದ ಅಂಜನೆಯ ಮಗುವು ಒಂದು ಪರ್ವತದ ಮೇಲೆ ಬೀಳಲು ಆಗ ಅಂಜನೆಯು ಗಾಬರಿಯಿಂದ ಸಖಿಯೇ ಈ ವಿಮಾನದಲ್ಲಿ ರಾಜಿಸುತ್ತಿರುವ ದರ್ಪಣದಲ್ಲಿ ನೋಡುತಿದ್ದೆನಾದ್ದರಿಂದ ಶಿಶುವು ಕೆಳಕ್ಕೆ ಬಿದ್ದು ಹೋಗಿರುತ್ತದೆ ಈಗೇನು ಮಾಡಲಿ ಹಾ ಸುತನೆ ಮುಂದೇನು ಗತಿ. ಹಾ ಮಾತುಲನೇ, ಈ ಮಗುವನ್ನು ನೋಡಿ ಪತಿ ದುಃಖವನ್ನು ಮರೆತಿದ್ದೆನು ಈಗ ಈ ವಿಮಾನದಿಂದ ಭೂಪತನವಾದ ಪಸುಳೆಯು ಜೀವಸಹಿತನಾಗಿರುತ್ತದೆಯೆ, ಅಯ್ಯೋ ನನಗೇನು ಗತಿಯೆಂದು ತನ್ನ ಸೋದರ ಮಾವನಾದ ಪ್ರತಿರವಿಯ ಪಾದಗಳ ಮೇಲೆ ಬೀಳಲು ಆಗ ಪ್ರತಿರವಿಯು ಯಾಕಮ್ಮ ದುಃಖಿಸುತ್ತೀಯೆ ನಿನ್ನ ಮಗುವಿಗೆ ಅಪಾಯ ಸಂಭವಿಸುವುದಿಲ್ಲ ವಿಮಾನವನ್ನು ಇಳಿಸಿ ಹೋಗಿ ನೋಡೋಣ ಎಂದು ಬಂದು ನೋಡಲು ಬಹಳ ಆಶ್ಚರ್ಯಪಟ್ಟು—

ಪತನದ ಘಾತದ ಹತಿಯೊಳು ಶಿಲೆಯು। ಶತಛಿದ್ರಗಳಾಗಿರೆ ನೋಡಿ॥
ಅತುಳ ಪರಾಕ್ರಮಿ ಸುತನಿವನೆಂದು। ಅತಿಸಂತಸದಿಂ ಬಿಗಿದಪ್ಪಿ॥

ಪ್ರತಿರವಿಯು ಸಂತೋಷದಿಂದ ಆ ಪರ್ವತದ ಮೇಲೆ ಆಡುತಿದ್ದ ಮಗುವನ್ನು ಕಂಡು—

ಶಿಶುಪತನದಿಂದೀ ಪರ್ವತ। ಮಶನಿಯ ಹತಿಯಿಂದ ಒಡೆದ ಪರಿಹಜಿಸೆ ಮೇಣ್॥ ಶಿಶುಗುಂಡುಗಳೊದೆಯುತ್ತ। ಕುಶಲದೊಳ್ ಹುದರಿಯ ಶಿರವು ಚೆಂಡಾಡುವವೋಲ್॥

ಈ ಶಿಶುವಿನ ಪುಣ್ಯ ಪ್ರಭಾವವನ್ನು ವರ್ಣಿಸಲಸಾಧ್ಯವು ಈ ಮಗು ಪರ್ವತದ ಮೇಲೆ ಬಿದ್ದದ್ದರಿಂದ ಪರ್ವತದ ಬಂಡೆಯು ಛಿದ್ರಗಳಾಗಿ ಒಡೆದು

ಹೋಗಿರುತ್ತದೆ, ಏನು ವಿಚಿತ್ರವು. ಈ ಶಿಶುವಿನ ಪುಣ್ಯ ಪ್ರಭಾವವನ್ನು ಎಷ್ಟೆಂದು ಹೇಳೋಣ ಅಮ್ಮಾ ಅಂಜನಾ! ನಿನ್ನ ಪುತ್ರನ ಪ್ರಭಾವವನ್ನು ನೋಡಿದೆಯಾ ಮಗುವನ್ನು ಕರೆದುಕೊಂಡು ವಿಮಾನದಲ್ಲಿ ಕುಳಿತುಕೋ ಎನಲು ಆಗ ಅಂಜನೆಯು ಆಶ್ಚರ್ಯಪಟ್ಟವಳಾಗಿ ಸಂತೋಷದಿಂದ ತನ್ನ ಮಗುವನ್ನು ಎತ್ತಿಕೊಂಡು ಮುದ್ದಾಡಿ ವಿಮಾನದಲ್ಲಿ ಕುಳಿತು, ಎಲ್ಲರೂ ಶ್ರೀಪುರಕ್ಕೆ ಬಂದು ಪ್ರತಿರವಿಖೇಚರನು ತನ್ನ ಪಟ್ಟಣವನ್ನು ಶೃಂಗರಿಸಿ ಅರಮನೆಯನ್ನು ಅಲಂಕರಿಸಿ ಬಂಧುಗಳನ್ನು ವೈಧಿಕರನ್ನು ಕರೆಯಿಸಿ ಶುಭ ದಿನದಲ್ಲಿ—

ಪ್ರತಿರವಿಖೇಚರ ಸೊನೆ ಅಂಜನೆಯ। ಸುತನಿಗೆ ಹನುಮಂತನೆಂದೆಂಬ ||
ಅತಿಶಯ ನಾಮಕರಣವನೆಸಗಿದ| ಹಿತದೊಳು ಸಲಹುತಲಿರುತಿರಲು||

ಅಂಜನಾದೇವಿಯ ಸುತನಿಗೆ ಹನುಮಂತನೆಂದು ನಾಮಕರಣ ಮಾಡಿಸಿ, ಅತಿವೈಭವದಿಂದ ಮಹೋತ್ಸವವನ್ನು ನೆರವೇರಿಸಿ ಅತಿ ಸಂತೋಷಚಿತ್ತನಾಗಿ ಅವರುಗಳನ್ನು ಪ್ರೀತಿಯಿಂದ ಸಲಹುತ್ತಾ ಐದನೇ ವರ್ಷದಲ್ಲಿ ಹನುಮಂತನಿಗೆ ಚೌಲಕರ್ಮ ಮಹೋತ್ಸವವನ್ನು ಅತಿ ವೈಭವದಿಂದ ನೆರವೇರಿಸಿದನು—

ಇತ್ತ ಯುದ್ಧದಲ್ಲಿ ಪವನಂಜಯನು ವರುಣ ರಾಜನನ್ನು ಜಯಿಸಿ ಖರ ದೂಷಣಾದಿಗಳ ಸೆರೆಯನ್ನು ಬಿಡಿಸಿ, ರಾವಣ ಸಾರ್ವಭೌಮನಿಂದ ಅಪ್ಪಣೆ ಪಡೆದು ಹಿಂದಿರುಗಿ ತನ್ನ ಸೇನೆ ಸಮೇತನಾಗಿ ಬರುತ್ತಿರುವ ಕಾಲದಲ್ಲಿ ಸಖನಾದ ಪ್ರಹಸಿತನು ಚಿಂತಿಸುತ್ತಿರುವುದನ್ನು ವಾಯುಕುಮರನು ನೋಡಿ ಮಿತ್ರನೇ ಏತಕ್ಕೆ ಚಿಂತಿಸುತ್ತೀಯೆ ಈ ದುಗಡವೇನು ನನ್ನಲ್ಲಿ ಹೇಳು ಪ್ರಹಸಿತನು ರಾಜೇಂದ್ರನೇ ಗರ್ಭವತಿಯಾದ ನಿನ್ನ ಪತ್ನಿಯನ್ನು ನಿನ್ನ ತಂದೆ ತಾಯಿಗಳು ಕಾಡಿಗೆ ನೂಕಿದರೆನ್ನುವ ಸುದ್ಧಿಯನ್ನು ನಾನು ತಿಳಿದು ಈ ವ್ಯಥೆಗೆ ಕಾರಣವಾಯಿತು ಎನಲು ಆಗ ವಾಯುಕುಮಾರನು ಈ ಸುದ್ದಿಯನ್ನು ಕೇಳಿ ಅತಿ ದುಃಖದಿಂದ ಹಾ ಅಂಜನಾ, ಹಾ ಪ್ರಾಣಪ್ರಿಯೆ ನಿನಗೆ ಇಂಥಾ ವಿಪತ್ತು ಸಂಭವಿಸಿತೇ ಎಂದು ಮೂರ್ಛೆಬಿದ್ದು ಶೈತ್ಯೋಪಚಾರದಿಂದ ಎದ್ದು

ಕಂದ—ರಾಗ—ನಾದನಾಮಕ್ರಿಯೆ

ಅವನಿಪತಿಯೆನ್ನ ತಾತನು। ಸುವಿನಯ ಪತಿಭಕ್ತೆಯಾದ ಎನ್ನಯ ಸತಿಯಂ।
ಅವಮಾನವೆಂದು ತಿಳಿಯದೇ। ಭುವಿಯೊಳ್ ಜಡರಂತೆ ವನಕೆ ಬಿಡುವು
ದುಚಿತವೇ ||

ಹಾ ಅಂಜನಾ ಕಾಡಿನಲ್ಲಿ ನಿನಗೆಷ್ಟು ಸಂಕಟವೋ, ಹಾ ವಿದಿಯೇ ಇದನ್ನು ಹೇಗೆ ಸಹಿಸಲಿ, ಅಳಲಿ ಫಲವೇನು. ಎಂದು ತನ್ನ ಸೇನಾಪತಿಯನ್ನು ಕರೆದು ನನಗೆ ಕ್ಷಿಪ್ರಕಾರ್ಯವಿರುವುದರಿಂದ ನನ್ನ ಮಿತ್ರನೊಡನೆ ಪಟ್ಟಣಕ್ಕೆ ಹೋಗುವೆನು. ನೀನು ಸೇನೆಯೊಡನೆ ಜಾಗರೂಕತೆಯಿಂದ ಬರಬೇಕೆಂದು ಹೇಳಿ ತಾನು ತನ್ನ ಮಿತ್ರನೊಡನೆ ಹೊರಟು ಪಟ್ಟಣಕ್ಕೆ ಬಂದು ಅಂಜನಾ ದೇವಿಯ ಅಂತಃಪುರದ ಬಳಿಯಲ್ಲಿ ನಿಂತು ನೋಡಿ ಹಾ ಅಂಜನಾ ನಿನ್ನ ಅಂತಃ ಪುರವು ಅಮಾವಾಸ್ಯೆಯಂತೆ, ಕತ್ತಲೆಯಾಗಿಯೂ ಸೂರ್ಯನಿಲ್ಲದ ಆಕಾಶ ದಂತೆಯೂ, ನೀರಿಲ್ಲದ ಸರೋವರದಂತೆಯೂ ತೋರುವುದು ಹಾ ಅಂಜನಾ ಮುಂದೇನು ಗತಿ—

ರಾಗ—ಬೇಹಾಗ್ ರೂಪಕತಾಳ

ಹಾ ಪ್ರಿಯೇ ಎಲ್ಲಿ ಪೋದೆ। ಪಲ್ಲವಾಧರೇ ||ಪಲ್ಲ|| ಗುರುಕುಚೆಯೆ ನಿನ್ನರ ಮನೆಯ ನಾ। ಭರದೊಳೆಯ್ದಿದೆ|| ಸರಸನೊಳು ಮರುಕವಿಡದೆ। ತೊರೆದ ಗಲ್ದಿಯಾ ||೧|| ಪ್ರಾಣಕಾಂತೆಯಗಲಿ ಯೆನ್ನ। ಪ್ರಾಣವುಳಿಯುವುದು ಹಾ || ಕೇಣವೇಕೆನ್ನೊಳನಿತು|| ಕಾಣಿಸು ಮುಖವ ||೨|| ಮಾರನಾನೇ ಕೀರ ಮಧುರ। ಚಾರು ನುಡಿಯನು। ತೊರದೆ ಹಾ ಮೋಸಮಾಡಿ। ಗಾರು ಗೊಳಿಸುವೆ ||೩||

ಅಯ್ಯೋ ಈಗೇನು ಮಾಡಲಿ ಎಂದು ದುಃಖಿಸುತ್ತಿರಲು ಪ್ರಹಸಿತನು ಇನ್ನು ಶೋಕಿಸಿ ಫಲವೇನು ಈ ದುಃಖವನ್ನು ಬಿಡು ಇಗೋ ನಿನ್ನ ತಂದೆ ಯಾದ ಪ್ರಹ್ಲಾದ ರಾಜನು ಇಲ್ಲಿಗೆ ಬಂದಿರುವನು, ನೋಡು ನಿನ್ನ ರಾಣಿಯ ವಿಷಯವನ್ನು ತಿಳಿದುಕೊ ಎನಲು ಆಗ ಪ್ರಹ್ಲಾದ ರಾಜನು ಪುತ್ರನೇ ಏತ ಕ್ಕೆಷ್ಟು ಶೋಕವು ಗರ್ಭಿಣಿಯಾಗಿದ್ದುದರಿಂದ ಅಪಕೀರ್ತಿಯೆಂದು ನಿನ್ನ ಪತ್ನಿ ಯನ್ನು ಕಾಡಿಗೆ ಕಳುಹಿಸಿದೆವು ಎನಲು ವಾಯುಕುಮಾರನು ಏನು ಕಾಡಿಗೆ ಕಳುಹಿಸಿದಿರಾ, ಅಯ್ಯೋ ಹಾ ಪ್ರಾಣಕಾಂತೆಯೇ ನಿನ್ನ ಮುಖಾರವಿಂದವನ್ನು ಮತ್ತೆ ನೋಡುವೆನೇ

ರಾಗ। ಭೈರವಿ ಆದಿತಾಳ—(ಮಾತೆ ಮಾನವಲ್ಲ)

ತಾತ ನ್ಯಾಯವಲ್ಲ। ಪಾತಕವಿದು ||ಪಲ್ಲ|| ಜಾತನ ಕೇಳದಿಂ। ರೀತಿಯ ಗೈದುದು ||ಅನು||ಪಲ್ಲ|| ಆರ ದೋಷವನು। ಮೂರು ವಿಧದೊಳ್ಪಿ। ಚಾರ

ಮಾಡದೆ। ದೂರವಗೈವರೇ ॥೧॥ ವರುಣ ರಣಕೆ ನಾ। ಹೊರಟ ನಿಶಿ ಯೊಳು ತರುಣಿಯ ಕೂಡುತಾ। ತುರದೊಳು ಹೋದೆನು ॥೨॥ ಆ ಪತಿ ವ್ರತೆಯ। ಕಾವಾಡಲಿನ್ನಯ। ಭಾಪುರಿ ಯಿತ್ತೊಡಂ। ಈ ಪರಿಗೈದೆಯಾ॥೩॥

ತಂದೆಯೇ ನೀನು ಚೆನ್ನಾಗಿ ಪರೀಕ್ಷೆ ಮಾಡದೆ ಈ ದುರವಸ್ಥೆಗೆ ಈಡು ಮಾಡಿದೆಯಾ, ವರುಣನ ಸಮರಕ್ಕೆ ಹೋದ ದಿನದ ರಾತ್ರಿಯಲ್ಲಿ ಪತ್ನಿಯನ್ನು ಸ್ಮರಿಸಿಕೊಂಡು ಪುನಃ ಪುರಕ್ಕೆ ಬಂದು ಅಂತಃಪುರದಲ್ಲಿದ್ದ ನನ್ನ ಪತ್ನಿಯಲ್ಲಿ ಆ ದಿನ ಸುಖದಿಂದ ಇದ್ದು ಕುರುಹುಗೋಸ್ಕರ ನನ್ನ ಭಾಪುರಿಯನ್ನು ಅವಳಿಗೆ ಕೊಟ್ಟು ಸಮಾಧಾನಪಡಿಸಿ ನಾನು ಆತುರದಿಂದ ಯುದ್ಧಕ್ಕೆ ಹೊರಟು ಹೋದೆನು ನೀನು ವಿಚಾರ ಮಾಡದೆ ದುಡುಕಿ ನನ್ನನ್ನು ದುಃಖಕ್ಕೊಳಗು ಮಾಡಿ ಆ ನನ್ನ ಪ್ರಿಯ ಪತ್ನಿಗೂ ಕಷ್ಟವನ್ನು ಪಡಿಸಿದೆಯಾ, ಹಾ ಪ್ರಾಣಕಾಂತೆ ಎಲ್ಲಿರುವೆ! ಮುಖವನ್ನು ತೋರಿಸು ಎಂದು ದುಃಖಿಸುತ್ತಿರಲು ಆಗ ಪ್ರಹ್ಲಾದನು ತನ್ನ ಮನಸ್ಸಿನಲ್ಲಿ ವಿಚಾರಮಾಡದೆ ದುಡುಕಿನಿಂದ ಮಾಡಿದುದು ತಪ್ಪೇ ಸರಿ ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು ಪುತ್ರನ ಶೋಕ ಶಮರ್ಥವಾಗಿ ಸುಳ್ಳನ್ನು ಹೇಳುವೆನು ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸಿ ಪುತ್ರನನ್ನು ಕುರಿತು

ಕಂದ—ರಾಗ—ಭೈರವಿ

ಸುತನಿಂಕೇತಕೆ ಚಿಂತಿಪೇ। ನುತ ಮಹೇಂದ್ರಾಖ್ಯ ಪುರಿಗೆ ಸತಿಯಂಜನೆಯಂ॥ ಕ್ಷಿತಿಯರಿಯೆ ಬೀಳುಕೊಟ್ಟೆವು। ಮತವೆಂದು ವಸಂತಮಾಲೆ ಸಖಿಯೊಡಸರಿಯ್ಯೆ॥

ಸುಕುಮಾರನೆ ಈ ಚಿಂತೆಯನ್ನು ಬಿಡು ನಿನ್ನ ಪತ್ನಿಯನ್ನು ಅವರ ತಂದೆಯ ಪಟ್ಟಣವಾದ ಮಹೇಂದ್ರಪುರಕ್ಕೆ ನ್ಯಾಯವಾಗಿಯೇ ವಸಂತೆ ಸಖಿಯೊಡನೆ ಕಳುಹಿಸಿರುವೆನು ಎಂದು ಹೇಳಿ ಹೊರಟುಹೋಗಲು ಆಗ ವಾಯು ಕುಮಾರನು ತನ್ನ ಮನಸ್ಸಿನಲ್ಲಿ ಇದೇನು ನಮ್ಮ ತಂದೆಯ ಮೊದಲಿನ ಮಾತಿಗೂ ಈಗಿನ ಮಾತಿಗೂ ಸಂಶಯವಾಗಿದೆ ಆದುದರಿಂದ ನನ್ನ ಮಿತ್ರನೊಡನೆ ಮಹೇಂದಪುರಿಗೆ ಹೋಗುವೆನು ಎಂದು ತನ್ನ ಮಿತ್ರನನ್ನು ಕರೆದುಕೊಂಡು ವಿಮಾನಾರೂಢನಾಗಿ ತನ್ನ ಮಾವನ ಪಟ್ಟಣವಾದ ಮಹೇಂದ್ರಪುರಿಗೆ ಬಂದು ಮಾಹೇಂದ್ರ ರಾಜನಿಗೆ ವಂದಿಸಿ ಮಾತುಲನೆ ನನ್ನ ಪ್ರಿಯ ಪತ್ನಿ

ಅಂಜನೆಯೆಲ್ಲಿರುವಳು ತಿಳಿಸಿ, ಎನಲು ಆ ಮಾಹೇಂದ್ರ ರಾಜನು, ನಿನಗೆ ಕುಶಲವಾಗಲಿ ಎಂದು ಹರಸಿ, ನಿನ್ನ ಪತ್ನಿಯನ್ನು ಗರ್ಭವತಿಯೆಂದು ನಿಮ್ಮ ತಂದೆಯೇ ಬಿಟ್ಟಿದ್ದ ಪ್ರಯುಕ್ತ ಆ ಅಪಕೀರ್ತಿಗೋಸ್ಕರ ಸ್ವಂತ ಮಗಳೆಂದು ಪಕ್ಷಪಾತವಿಡದೆ ನಾವೂ ತ್ಯಜಿಸಿದೆವು ಎಂದು ಹೇಳಲು ವಾಯುಕುಮಾರನು ಇದನ್ನು ಕೇಳಿ ಮೂರ್ಛೆಯಿಂದ ಬೀಳಲು, ಸೇವಕರು ಶೈತ್ಯೋಪಚಾರವಮಾಡು ತ್ತಿರುವಲ್ಲಿ ಮಾಹೇಂದ್ರ ರಾಜನು ನನ್ನ ಸುತೆಯು ಪತಿಭಕ್ತಿಯಿಲ್ಲದ ಪಕ್ಷದಲ್ಲಿ ಈತನಿಗೆ ಕೊರತೆಯಾಗುತ್ತಿರಲಿಲ್ಲ ಪುತ್ರಿಯನ್ನು ಕಳೆದುಕೊಂಡುದುದಲ್ಲದೆ ಅಳಿಯನ ವ್ಯಸನವನ್ನು ನೋಡುವುದು ನಮ್ಮ ಅವಿವೇಕದಿಂದಲ್ಲವೇ ಎಂದು ಚಿಂತಿಸಿ ವಾಯುಕುಮಾರನೇ ಶೋಕಿಸಿ ಫಲವೇನು ಏಳು ಬಂದುದನ್ನೆಲ್ಲಾ ಅನುಭವಿಸಿಯೇ ತೀರಬೇಕು ಎನಲು ವಾಯುಕುಮಾರನು ಮೆಲ್ಲನೆದ್ದು ಹಾ ಅಂಜನಾ ನಿನ್ನನ್ನಗಲಿ ಎಂತು ಜೀವಿಸಲಿ ಎಂದು ಪ್ರಲಾಪಿಸುತ್ತಾ—

ರಾಗ ಧನಾಸಸಿ–ಆದಿತಾಳ—

ಪರಿಭವಿಸಿ ನೂಕಿದರೆ। ನರನಾಥರೀಶ್ವರೂ ||ಪಲ್ಲ|| ಪರಮ ಪತಿವ್ರತಾ। ಶಿರೋಮಣಿಯನು ವನಕೇ ||ಅ||ಪಲ್ಲ|| ಶರದಿಂದು ವದನೆಯೆ। ಅರವಿಂದ ನಯನಯೆ। ಬರಿಗಾದೊಳೇ ಪರಿ। ತರಹರಿಪೆಯೋ ಕಾಂತೆ ||೧|| ಕಾಂತನ ತೊರೆಯುತೆ। ಕಾಂತಾರದೊಳಗೆ ನೀಂ। ಚಿಂತೆಯೊಳಗೆ ಮುಳುಗಿ। ಎಂತು ಜೀವಿಪೆಯೋ ಹಾ ||೨|| ಮಾತುಳ ನೀತಿಯೇ। ಭೂತಳದೊಳ್‌ತನು। ಜಾತೆಯ ತೊರೆದುದು। ಏತರ ಬಾಳ್ವಿಕೆ ||೩||

ಅಕಟಕಟ ಅನ್ಯರನ್ನು ಹೀಯಾಳಿಸಿ ಫಲವೇನು ನನ್ನ ಕಾಂತೆಯೊಳು ರಮಿಸಿ ಹೋಗುವಾಗ ಪಿತೃಗಳಿಗೆ ಹೇಳದೆ ಆತುರದಿಂದ ಹೋದುದರಿಂದಲ್ಲವೇ ಇಷ್ಟು ಅನರ್ಥಕ್ಕೆ ಗುರಿಯಾಯಿತು ಎಂದು ದುಃಖಿಸಿ ತನ್ನ ಮಿತ್ರನಾದ ಪ್ರಹಸಿ ತನನ್ನು ಕುರಿತು ಸಖನೇ ನಡೆ ಹೋಗೋಣ ನನ್ನ ಅರಸಿಯಂತೆ ನಾನೂ ಅಡವಿಗೆ ತೆರಳುವೆನು ಎಂದು ಹೇಳಿ ತನ್ನ ಮಿತ್ರನ ಜೊತೆಯಲ್ಲಿ ಕಾಡಿಗೆ ಬಂದು, ಹಾ ಪ್ರಿಯೆ, ಅಂಜನಾ ನಿನ್ನ ಗತಿಯೇ ನನಗೂ ಆಯಿತು ನಿನ್ನ ರೂಪನ್ನು ನನ್ನ ಮನಸ್ಸಿನಲ್ಲಿ ಧ್ಯಾನಿಸುತ್ತಿರುವ ನನಗೆ ಮುಖವನ್ನು ತೋರಿಸು, ಹಾ ಪ್ರಾಣಕಾಂತೆ ಎಲ್ಲಿರುವೆಯೋ ಕಾಣೆನಲ್ಲಾ, ಮುಂದೇನು ಗತಿಯೆಂದು ಶೋಕಿಸಲು, ಆಗ ಪ್ರಹಸಿತನು ರಾಜನೆ ಚಿಂತಿಸದಿರು, ತ್ರಿಲೋಕದಲ್ಲಿ ಎಲ್ಲಿ

ದ್ದರೂ ಹುಡುಕಿ ನಿನ್ನ ಪತ್ನಿಯನ್ನು ಕರೆತರುವೆನು ಎನಲು, ವಾಯುಕುಮಾರನು ಪ್ರಹಸಿತನನ್ನು ಕುರಿತು ಮಿತ್ರನೇ ಸಂಕಟ ಒದಗಿದ ಕಾಲದಲ್ಲಿ ನಿನ್ನ ಸದುತ್ತರವನ್ನು ಕೇಳಿದ ನನಗೆ ಮತ್ತೂ ಸಂಕಟವಾಗುವುದು ಎನಲು ಪ್ರಹಸಿತನು ಸಂಕಟ ಬಂದ ಕಾಲದಲ್ಲಿ ಬೇಡವೆಂದು ಹೇಳಿದರೆ ದುಃಖವು ಉಲ್ಬಣವಾಗುವುದು ಸಹಜವೇ. ಇವನನ್ನು ಹೇಗೆ ಸಮಾಧಾನಪಡಿಸಲಿ ಎಂದು ಚಿಂತಿಸುತ್ತಿರುವಲ್ಲಿ ಪವನಂಜಯನು, ಮಿತ್ರನೇ ನನ್ನ ಸ್ಥಿತಿಯನ್ನು ನನ್ನ ಮಾತಾಪಿತೃಗಳಿಗೆ ತಿಳಿಸು ಹೋಗು ಎನಲು ಆಗ ಪ್ರಹಸಿತನು, ಮಿತ್ರನೇ ನಾನು ಯಾವಾಗಲೂ ನಿನ್ನನ್ನಗಲಿದವನಲ್ಲ. ಈ ಕಾಡಿನಲ್ಲಿ ನಿನ್ನನ್ನು ಏಕಾಂಗಿಯನ್ನಾಗಿ ತೊರೆಯುವ ವೇಳೆ ಲಭಿಸಿತೇ ಎಂದು ಮೂರ್ಛೆಯನ್ನು ತಾಳಲು ಆಗ ವಾಯುಕುಮಾರನು ಶೈತ್ಯೋಪಚಾರ್ಯಮಾಡಿ ನನ್ನ ಸಂಕಟಕ್ಕಿಂತಲೂ ಮಿತ್ರನ ಸಂಕಟವು ಅತ್ಯಧಿಕವಾದದ್ದು ಇದು ಸನ್ಮಿತ್ರರಿಗೆ ಸಹಜವೇ ಎನಲು ಆಗ ಪ್ರಹಸಿತನು ಎದ್ದು ಮಿತ್ರನಿಗೆ ವಂದಿಸಿ ನಾನು ನಿನ್ನನ್ನಗಲುವೆನು ಎಂದು ಹೇಳಿ ಅವನ ಅಪ್ಪಣೆಯಂತೆ ಪಟ್ಟಣಕ್ಕೆ ಹೋಗುವನು. ಅನಂತರ ವಾಯುಕುಮಾರನು ನನ್ನ ಮಿತ್ರನೂ ಅಗಲಿದನು ಇನ್ನು ನಾನು ಎಷ್ಟು ವ್ಯಥೆಪಟ್ಟರೂ ಕೇಳುವವರಾರು ಇದ್ದಾರೆಯೇ, ಹಾ ಪ್ರಾಣಕಾಂತೆಯೇ ?

ಕಂದ—ರಾಗ—ತೋಡಿ

ಹಾ ಸುಕುಮಾರ ತರಾಂಗಿಯೇ | ಹಾ ಸುದತೀಕುಲ ಶಿರೋಮಣಿಯೆ
ಲಲಿತಾಂಗಿಯೇ ‖ ಹಾ ಸಾರಸಾಯತಾಂಬಕಿ | ಹಾ ಸಕಲ ಕಲಾವಿದಗ್ಧೆ
ಹಾ ಅಂಜನೆಯೇ ‖

ರಾಗ—ಧನ್ಯಾಸಿ—ಅಟ್ಟತಾಳ—(ಸೀತೆಯ ಕಾಣುವ)

ಅಗಲಿದೆಯಾ ಎನ್ನ | ಮೃಗನೇತ್ರೆಯೆ ಹಾ ‖ ಬೇಗೆಯನು ಸಹಿಸೆನು |
ಮೊಗವನು ತೋರೇ ‖ ಪಲ್ಲ ‖ ಮಡದಿಯೆ ನಿನ್ನ | ಅಡವಿಗೆ ನೂಕಲು |
ಒಡಬಡುತೇ ಮನ | ತಡೆಯಲಾರೆನೆ ಹಾ ‖ ೧ ‖ ಘೋರ ಕಾನನದೊಳು
ಕ್ರೂರ ಮೃಗಂಗಳ |ಭ ೞರಿಬಾಧೆಯನೂ | ಸೈರಿಸುವೆನೆಂತಕಟಾ ‖ ೨ ‖
ಪತಿವ್ರತೆಯೆಂದು ನಿನ್ನ | ಪಿತನು ತಿಳಿಯದೆ | ಮತಿಶೂನ್ಯನಾಗಿ | ವ್ಯಥೆಪಡಿ
ಸಿದನೇ ‖ ೩ ‖ ಎಂದಿಗೆ ಕಾಣುವೇ | ಚಂದಿರ ವದನವ | ಸುಂದರಿ ನೀ

ಬಿಂದು । ನಂಪಡ ತೋರೆ ॥ ೪ ॥ ಎಲ್ಲಿರ ವೆಯೆ ನೀ । ನಲ್ಲಳೇ ವ್ಯಥೆಯಿಂ
ನಿಲ್ಲದೆನ್ನಾ ಮನ । ತಲ್ಲಣಿಸುವುದು ॥ ೫ ॥

ಹಾ ದೈವವೇ ನನ್ನ ಕಾಂತೆಯನ್ನು ಈ ಕಾಂತಾರದಲ್ಲಿ ಎಲ್ಲಿ ಹುಡುಕಿದರೂ ದೊರೆಯಲಿಲ್ಲ ಈಗೇನು ಮಾಡಲಿ ? ಮುಂದೆ ಹೋಗಿ ಕಾಡುಗಳನ್ನೆಲ್ಲಾ ಅಲೆದು ಹುಡುಕುವೆನು ಎಂದು ಅಲೆಯುತ್ತಿರಲು, ಇತ್ತ ಪ್ರಹಸಿತನು ಪಟ್ಟಣಕ್ಕೆ ಬಂದು ಪ್ರಹ್ಲಾದರಾಜನನ್ನು ಕಂಡು ಆತನಿಗೆ ವಂದಿಸಲು, ಆಗ ರಾಜನು, ಪ್ರಹಸಿತನೇ ಇದೇನು ನೀನೊರ್ವನೇ ಬರಲು ಕಾರಣವೇನು ? ನಮ್ಮ ಪುತ್ರನೆಲ್ಲಿ ಎಂದು ಕೇಳಲು ಆಗ ಪ್ರಹಸಿತನು ದೊರೆಯನ್ನು ಕುರಿತು, ಎಲೈ ರಾಜನೇ,

ಕಂದ—ರಾಗ—ಶಂಕರಾಭರಣ

ನಿನ್ನ ಸುತ ವಾಯುಕುವರಂ । ತನ್ನಯ ಸತಿ ಅಂಜನೆಯನು ಮಹೇಂದ್ರ
ಪುರದೊ । ಳುನ್ನತ ವಿಕ್ರಮಿ ಕಾಣದೆ । ಖಿನ್ನತೆಯಿಂ ಕಾಂತೆಯರಸೆ ಕಾಡಿಗೆ
ಪೋದಂ ॥

ವಾಯುಕುಮಾರನು ಮಹೇಂದ್ರಪುರಕ್ಕೆ ಹೋಗಿ ತನ್ನ ಮಾವನಾದ ಮಾಹೇಂದ್ರರಾಜನನ್ನು ತನ್ನ ಪತ್ನಿಯೆಲ್ಲಿರುವಳೆಂದು ಕೇಳಲು ಅದಕ್ಕಾತನು ನಿನ್ನ ತಂದೆತಾಯಿಗಳು ಅಂಜನೆಯನ್ನು ಅಪಖ್ಯಾತಿಯೆಂದು ಕಾಡಿಗೆ ನೂಕಿದ್ದರಿಂದ ನಾವು ಸಹ ಕೈಬಿಟ್ಟೆವು ಎನಲು ಆಗ ವಾಯುಕುಮಾರನು ದುಃಖಿಸುತ್ತಾ ತನ್ನ ಪತ್ನಿಯನ್ನು ಹುಡುಕಲು ಅರಣ್ಯ ಪ್ರವೇಶಮಾಡಿ ನನ್ನ ಕಾಂತೆಯನ್ನು ಕಾಣುವವರಿಗೂ ಪುರಕ್ಕೆ ಬರುವುದಿಲ್ಲವೆಂದು ತಾನು ಕಾಡಿಗೆ ಹೋದನೆಂದೂ ಈ ವಿಷಯವನ್ನು ನನ್ನ ತಂದೆತಾಯಿಗಳಿಗೆ ತಿಳಿಸೆಂದು ನನ್ನನ್ನು ಕಳುಹಿಸಿದನು ಎನಲು ರಾಜನೂ ರಾಣಿಯೂ ಸಹ ಮೂರ್ಛಾಕ್ರಾಂತರಾಗಲು ಶೈತ್ಯೋಪಚಾರದಿಂದ ಕೇತುಮತಿ—

ರಾಗ—ನಾದನಾಮಕ್ರಿಯೆ

ಕಂದ ನೀನೆಲ್ಲಿಗೆ । ಇಂದು ಹೋದೆಯೋ । ಹಾ ಹಾ ॥ ಪಲ್ಲ ॥ ಮಂದ
ಭಾಗ್ಯಳು ನಾನು । ನೊಂದುದು ಚಿತ್ತವು ॥ ಅ। ಪಲ್ಲ ॥ ಸುಂದರಮೂರ್ತಿ
ಯೆ । ಮಂದಿರ ರತ್ನವೇ । ಚಂದಿರ ಮೊಗವ ನಾ । ನೆಂದಿಗೆ ಕಾಣ್ಬೆನು
॥ ೧ ॥ ಮಾನಿನಿಯಾಕೆಗೆ । ಕಾನನ ಸೇರುವರೆ । ಭೂನಾಥ ಸುತರಗೆ ।

ನೂನವೆ ಹೆಂಡಿರು ‖ ೨ ‖ ಸುತ ನೀನು ಕಾಡೊಳು । ಹಿತಸಖನಗೆಲುಕೆ ।
ಕ್ಷಿತಿಯೊಳು ಪಿತೃಗಳ್ಗೆ । ಅತಿಶೋಕವೀಯುತೆ ‖ ೩ ‖

ಹಾ ಪುತ್ರನೇ ಒಬ್ಬನೇ ನನಗೆ ಸುಕುಮಾರನಾಗಿ ನೀನು ಈಗ ಅರಣ್ಯ ಪಾಲಾಗಿ ನನ್ನನ್ನು ಸಂಕಟಕ್ಕೆ ಗುರಿಮಾಡಿದೆಯಾ? ಹಾ ಪ್ರಿಯಸುತನೇ ಓರ್ವ ತರುಣಿಗಾಗಿ ನೀನು ದುಃಖಿಸಿ ಕಾಡುಪಾಲಾದೆಯಾ? ನೀನು ರಾಜಪುತ್ರನಾಗಿ ಅವಳಿಗಾಗಿ ನೀನು ವ್ಯಥೆಪಡಬಹುದೇ? ಅವಳಿಗಿಂತಲೂ ಹೆಚ್ಚಾದ ಸ್ಫುರದ್ರೂಪಿಗಳಾದ ಕನ್ಯಾಮಣಿಗಳು ದೊರೆಯುತ್ತಿರಲಿಲ್ಲವೇ? ನಿನಗೆ ರೂಪುಲಾವಣ್ಯವತಿಯರಾದ ಅನೇಕ ಮಂದಿ ಕನ್ಯೆಯರನ್ನು ತಂದು ನಿನಗೆ ವಿವಾಹಮಾಡುತ್ತಿದ್ದೆವಲ್ಲಾ? ನೀನೀ ಶೋಕದಿಂದ ಘೋರವಾದ ಕಾಡಿನಲ್ಲಿ ಅವಳಿಗಾಗಿ ಅಲೆಯುತ್ತಿರುವುದು ನನಗೆ ತುಂಬಾ ಸಂಕಟವಾಗುತ್ತದೆ ಹಾ ಪ್ರಿಯಪುತ್ರ ನಿನ್ನ ಮಿತ್ರನನ್ನು ಸಹ ತೊರೆದು ಏಕಾಂಗಿಯಾಗಿ ಸಂಕಟಪಡುತ್ತಿರುವೆಯಾ? ಬೇಗ ಬಂದು ನನಗೆ ನಿನ್ನ ಮುಖವನ್ನು ತೋರಿಸಬಾರದೇ ಎಂದು ಪ್ರಲಾಪಿಸುತ್ತಿರಲು ಪ್ರಹ್ಲಾದರಾಜನು ರಾಣಿಯನ್ನು ಕುರಿತು, ತರುಣಿಯೆ ದುಃಖಿಸುವುದೇ ತಕ್ಕೆ?

ಕಂದ—ರಾಗ—ಕಾನಡ

ಪೂರ್ವದೊಳ ವಿಚಾರದಿನಾವ । ಗರ್ವದೊಳಂಜನೆಯ ವನಕೆ ನೂಕಿದ ದೋಷದೀ ‖ ಉರ್ವಿಯೊಳಾದಿತು ಸುತಗಿದು। ಪರ್ವತಪ್ರಖ್ಯಾತಿಯಮಗೆ ಕರ್ಮೋದಯದಿಂ ‖

ಪ್ರಿಯೆ ನಾವು ಮೊದಲು ನಮ್ಮ ಪುತ್ರನು ಬರುವವರೆಗೂ ನಿಧಾನಿಸದೆ ನಮ್ಮ ಸೊಸೆಯನ್ನು ಅರಣ್ಯಕ್ಕೆ ಕಳುಹಿಸಿದುದರಿಂದಲೇ ಈಗ ನಮ್ಮ ಕುವರನೂ ಕಾಡಿಗೆ ಹೋಗಿ ಸಂಕಟಪಡುವ ಫಲವು ಪ್ರಾಪ್ತಿಸಿತು ಇನ್ನು ಚಿಂತಿಸಿ ಫಲವೇನು? ಪ್ರಹಸಿತನೇ ನಮ್ಮ ಕುಮಾರನು ಯಾವ ಅರಣ್ಯದಲ್ಲಿರುವನು ಹೇಳೆನಲು ಆಗ ಪ್ರಹಸಿತನು ರಾಜೇಂದ್ರನೆ ಭೂತಾರಣ್ಯದಲ್ಲಿರುವನು ಎಂದು ಹೇಳಲು ರಾಜನು ಚಾರನನ್ನು ಕರೆದು ಎಲೈ ಚಾರನೆ ನನ್ನ ಸುಕುಮಾರ ಮತ್ತು ಸೊಸೆ ಇವರ ವೃತ್ತಾಂತವನ್ನೆಲ್ಲಾ ಅನುರಹದ್ವೀಪದ ಶ್ರೀಪುರಕ್ಕೆ ದೊರೆಯಾದ ಪ್ರತಿರವಿಗೆ ತಿಳಿಸಿ ನನ್ನ ಕುಮಾರನನ್ನು ಹುಡುಕಿತರುವ ನಿಮಿತ್ತವಾಗಿ ಆತನನ್ನು ಭೂತಾರಣ್ಯಕ್ಕೆ ಬರುವಂತೆಯೂ ನಾವು ಅಲ್ಲಿಗೆ ಬರುತ್ತಾರೆಂತಲೂ

ಬೇಗ ಹೋಗಿ ತಿಳಿಸು ಎನಲು ಚಾರನು ಅದರಂತೆ ವೇಗವಾಗಿ ಹೊರಟು ಶ್ರೀಪುರಕ್ಕೆ ಬಂದು ಪ್ರತಿರವಿ ರಾಜನನ್ನು ಕಂಡು ಅವನಿಗೆ ವಂದಿಸಿ ಮಹಾರಾಜನೇ ನನ್ನನ್ನು ನಮ್ಮ ರಾಜನಾದ ಪ್ರಹ್ಲಾದ ಮಹಾರಾಜನು ತಮ್ಮ ಸನ್ನಿಧಾನಕ್ಕೆ ಕಳುಹಿಸಿರುತ್ತಾನೆ ತಮ್ಮ ಸೊಸೆಯಾದ ಅಂಜನಾದೇವಿಯು ಜಾರ ಗರ್ಭ ಪಡೆದಳೆಂಬ ಅಪಖ್ಯಾತಿಯಿಂದ ಅವಳನ್ನು ಕಾಡಿಗೆ ಕಳುಹಿಸಲು ಈ ವೃತ್ತಾಂತವನ್ನು ತಿಳಿದ ತನ್ನ ಕುವರನಾದ ವಾಯುಕುಮಾರನು ಅವಳ ವ್ಯಾಮೋಹದಿಂದ ದುಃಖಿಸುತ್ತಾ ಅವಳನ್ನು ಹುಡುಕಲು ಈಗ ಭೂತಾರಣ್ಯದಲ್ಲಿ ತನ್ನ ಸುತನು ಇರುವನಂತೆ, ತಾವುಗಳು ಅಲ್ಲಿಗೆ ಬರುತ್ತಾರೆಂತಲೂ ನೀವೂ ಜಾಗ್ರತೆಯಾಗಿ ವಿಮಾನಾರೂಢರಾಗಿ ಹೊರಟುಬಂದು ವಾಯು ಕುಮಾರನನ್ನು ಜಾಗ್ರತೆಯಾಗಿ ಕರೆದುಕೊಂಡುಬರಬೇಕೆಂಬುವುದೇ ನಮ್ಮ ಮಹಾರಾಜನ ಮುಖ್ಯಾಭಿಪ್ರಾಯವನ್ನು ತಮಗೆ ತಿಳಿಸೆಂದು ಹೇಳಿರುವನು ಎನಲು ಆಗ ಪ್ರತಿರವಿಯು ಇದೇನೀ ಆಶ್ಚರ್ಯವು? ಪ್ರಹ್ಲಾದ ಮಹಾರಾಜನು ಗರ್ಭವತಿಯಾದ ತನ್ನ ಸೊಸೆಯನ್ನು ಮಾತ್ರ ಅರಣ್ಯಕ್ಕೆ ಕಳುಹಿಸಿದುದಕ್ಕೆ ಚಿಂತಿಸಲಿಲ್ಲ. ಈಗ ತನ್ನ ಕುಮಾರನು ಮಾತ್ರ ಕಾಡಿಗೆ ಹೋದುದಕ್ಕೆ ಬಹು ಚಿಂತಿಸಿ ತಾವೂ ಹುಡುಕುವುದಕ್ಕೆ ಹೋದುದಲ್ಲದೆ ನನ್ನನ್ನೂ ಸಹ ಬರಹೇಳಿದನೆ? ಸಾಕು ಸಾಕು, ಪ್ರಪಂಚದಲ್ಲಿ ಇತರರ ಮಕ್ಕಳನ್ನು ತನ್ನ ಮಕ್ಕಳಂತೆ ಭಾವಿಸುತ್ತಾರೆಯೇ? ಈತನು ಎಂಥಾ ಅವಿಚಾರಿಯು? ಒಳ್ಳೇದು ಎಲೆ ಚಾರನೆ ಬರುವೆನು ನೀನು ಹೋಗೆನಲು ಚಾರನು ಹೋದನಂತರ ಪ್ರತಿರವಿಯು ಅಂಜನಾದೇವಿಯ ಅಂತಃಪುರಕ್ಕೆ ಬರಲು ಅಂಜನೆಯು ಮಾವನಿಗೆ ವಂದಿಸಿ ಮಾತುಲನೆ, ನಿನ್ನ ಮುಖವು ಚಿಂತೆಯನ್ನು ಸೂಚಿಸುತ್ತಿದೆಯಲ್ಲಾ, ಕಾರಣವೇನು ಎನಲು ಆಗ ಪ್ರತಿರವಿಯು ವ್ಯಸನದಿಂದ ಅಮ್ಮಾ ಅಂಜನೆ ನಿನ್ನನ್ನು ಅಡವಿಗೆ ನೂಕಿರುವ ಸಂಗತಿಯನ್ನು ನಿನ್ನ ಪತಿಯು ತಿಳಿದು ಅತಿ ದುಃಖದಿಂದ ನಿನ್ನನ್ನು ಹುಡುಕಲು ಕಾಡಿನಲ್ಲಿ ಶೋಕಿಸುತ್ತಾ ಅಲೆಯುತ್ತಾ ಏಕಾಂಗಿಯಾಗಿ ಅಲ್ಲಿ ಸಂಕಟಪಡುತ್ತಿದ್ದಾನೆಂತಲು ಅವನ ತಂದೆತಾಯಿಗಳು ಈ ವೃತ್ತಾಂತವನ್ನು ಕೇಳಿ ತಾವು ದುಃಖದಿಂದ ತಮ್ಮ ಪುತ್ರನನ್ನು ಹುಡುಕುವುದಕ್ಕಾಗಿ ಹೊರಟು ನಾನೂ ಸಹ ಬರುವಂತೆ ಚಾರನ ಮೂಲಕ ಹೇಳಿಕಳುಹಿಸಿರುತ್ತಾನೆ ಎನಲು ಆಗ ಅಂಜನೆಯು ಅತಿ ದುಃಖದಿಂದ ಹಾ ಪ್ರಿಯನೇ

ಎಲ್ಲಿ ಹೋದೆಯೆಂದು ಮೂರ್ಛಾಕ್ರಾಂತಳಾಗಲು, ವಸಂತೆಯು ಚೆನ್ನಾಯಿತು, ಪದೇಪದೇ ಈಕೆಯ ದುಃಖವನ್ನೂ ಸ್ಮೃತಿ ತಪ್ಪುವುದನ್ನೂ ನೋಡುವುದು ನನ್ನ ಹಣೆಯಬರಹ ಅಮ್ಮಾ ಅಂಜನೆ ಏಳು ಏಳು, ಚಿಂತೆ ಮಾಡಬೇಡ ಎಂದು ಶೈತ್ಯೋಪಚಾರ ಮಾಡಲು ಆಗ ಅಂಜನೆಯು ಚೇತರಿಸಿಕೊಂಡು—

ರಾಗ – ನಾದನಾಮಕ್ರಿಯೆ—ಅಟ್ಟತಾಳ

ಹಾ ವಿಧಿಯೇ | ಜೀವಿಸಲಾರೆನೆ ನಾ || ಪಲ್ಲ || ಕಾಂತ ನಿನ್ನಯ ಪ್ರಾಣ | ಕಾಂತೆಯನಗಲೀಗ | ಕಾಂತಾರದೊಳೆಂತು | ಸಂತಾಪಪಾಂತೆ ಹಾ || ೧ ||
ಸುತನತಿಶಯವೇಂ | ಅತಿಹಿತ ಸತಿಯೇಂ | ಪತಿಯನಗಲುತೆ ನಾಂ | ಗತ ಭಾಗ್ಯಳಾದೆನೆ || ೨ ||

ಹಾ ದೈವವೇ, ಪದೇಪದೇ ಈ ದುಃಖಪರಂಪರೆಯು ಬರುವುದು. ನಾನೇನು ಪಾಪಿಯೇ ? ಭಗವಂತನೇ ಶರಣು ಎಂದು ಪ್ರಲಾಪಿಸುತ್ತಿರಲು ಆಗ ವಸಂತೆಯು, ರಾಣಿಯೇ ಇದು ಪಾಪಶೇಷಾಂತ್ಯವು. ಇನ್ನು ಸ್ವಲ್ಪ ದಿವಸದಲ್ಲಿಯೇ ನಿನ್ನ ಕಾಂತನು ಬರುವನು, ಈ ಚಿಂತೆಯನ್ನು ಬಿಡು ಎನಲು ಪ್ರತಿರವಿಯು ಏಕಮ್ಮಾ ಅಂಜನೆ ಇಷ್ಟು ಸಂತಾಪವು ? ನಾನು ವಿಮಾನಾರೂಢನಾಗಿ ಹೋಗಿ ಎಲ್ಲಿದ್ದರೂ ನಿನ್ನ ಕಾಂತನನ್ನು ಹುಡುಕಿ ಕರೆತರುವೆನು. ನೀನು ಚಿಂತೆಯನ್ನು ಬಿಡು ಎಂದು ಸಮಾಧಾನ ಮಾಡಿ, ತನ್ನ ವಿಮಾನಾರೂಢನಾಗಿ ಹೊರಟು ಭೂತಾರಣ್ಯಕ್ಕೆ ಬರುತ್ತಿದ್ದಾನೆ ಇತ್ತ ಅರಣ್ಯದಲ್ಲಿ ಸಂಚರಿಸುತ್ತಾ ಹಾ ಪ್ರಿಯೆ !

ಕಂದ—ರಾಗ—ಆನಂದಭೈರವಿ

ಸುಮಗಳೆ ಸುಮನ್ಮೃದ್ವಂಗಿಯಾ | ಕಮಲಗಳೇ ಕಮಲಮುಖಿಯ | ಕುಮುದಗಳೇ ನೀವ್ || ಕುಮುದಾಕ್ಷಿಯ ಲಲಿತಾಂಗಿಯಾ || ಭ್ರಮರಾಳಕಿಯನ್ನು ಕಾಣರೇ ಭ್ರಮರಗಳೇ ||

ಅಕಟಾ ಪ್ರಾಣಕಾಂತೆಯನ್ನು ಎಷ್ಟು ಹುಡುಕಿದಾಗ್ಯೂ ದೊರೆಯಲಿಲ್ಲ ವಲ್ಲಾ? ಈಗೇನುಮಾಡಲಿ ಎಂದು ದುಃಖಿಸುತ್ತಾ—

ರಾಗ—ಆನಂದಭೈರವಿ—ರಾಗ—ಫೀಲು—ಆದಿತಾಳ

ಹಾ ಕಾಂತೆ | ಶಾಂತೇ | ಖ್ಯಾತೇ | ವಿನೀತೇ || ಪಲ್ಲ || ನಾರಿಶಿರೋಮಣಿ | ತೋರು ನೀ ಮುಖವನು | ಸಾರಸಾಕ್ಷಿ ಬಾರೆ ಸೀರೆ || ೧ || ಅರಿಯದೆ

ನಿನ್ನನು । ಉರುತರ ಬಾಧೆಗೆ । ಗುರಿಯಮಾಡೀ ಸಿರಿಯಾ ತೊರೆದೇ || ೨ ||
ಘೋರಡವಿಯೊಳು | ಕ್ರೂರಮೃಗಂಗಳ । ಭೂರಿಬಾಧೆಯ । ಸಹಿಸುವೆ
ಎಂತೂ || ೩ ||

ಹಾ, ಪಾಪಿಯಾದ ವಾಯುಕುಮಾರನೆ, ಮೊದಲು ನೀನು ಪುರಕ್ಕೆ ಬಂದುದನ್ನು ಅರಮನೆಯಲ್ಲಿ ಯಾರಿಗೂ ಹೇಳದೆ ಹೋದ್ದರಿಂದಲೇ ಆ ನನ್ನ ಪ್ರಿಯ ಸುಂದರೀಮಣಿಯನ್ನು ನೀಗಿದೆ, ಅಯ್ಯೋ ನಿರ್ಭಾಗ್ಯನೇ ಎಂದು ಮೂರ್ಛಾಕ್ರಾಂತನಾಗಿ ಹಾಗೆಯೇ ಸ್ವಲ್ಪ ಚೇತರಿಸಿಕೊಂಡವನಾಗಿ ಹಾ ಕಾಂತೆಯೇ ಹನ್ನೆರಡು ವರ್ಷ ನಿನ್ನನ್ನು ಬಳಲಿಸಿದ್ದರಿಂದಲ್ಲವೇ ಈಗ ನನ್ನನ್ನು ಬಳಲಿಸುವುದು ನ್ಯಾಯವೇ ? ಎಂದು ಪ್ರಲಾಪಿಸಿ ಮುಂದೆ ಬಂದು ಅಲ್ಲಿದ್ದ ಕೊಳದಲ್ಲಿ ಜಲಪಾನ ಮಾಡಿ ತನ್ನ ದಾಹವನ್ನು ತೀರಿಸಿಕೊಂಡು ಅಲ್ಲಿದ್ದ ಒಂದು ಮಾವಿನಮರದ ನೆರಳಿನಲ್ಲಿ ಕುಳಿತಿರುವಷ್ಟರಲ್ಲಿ ಅಂತರಿಕ್ಷದಲ್ಲಿ ಪ್ರಹ್ಲಾದ ರಾಜನು ಅವನ ಪತ್ನಿಯಾದ ಕೇತುಮತಿಯೂ ಸಹ ಆ ಅರಣ್ಯಕ್ಕೆ ಬರುತ್ತಿರುವಷ್ಟರಲ್ಲಿಯೇ ಪ್ರತಿರವಿಖೇಚರನು ಸಹ ಬಂದು ಪ್ರಹ್ಲಾದರಾಜನನ್ನೂ ಸಹ ಕಂಡು ಆ ಘೋರಾರಣ್ಯದಲ್ಲಿ ವಾಯುಕುಮಾರನನ್ನು ಹುಡುಕುತ್ತಿರುವಾಗ ವಾಯುಕುಮಾರನು ದುಃಖದಿಂದ ರೋದಿಸುತ್ತಾ—

ಕಂದ—ರಾಗ—ಸಾವೇರಿ

ಮಧುಸೋರ್ವ ಚೂತಫಲವೇ । ಸುಧೆಯು ಬೀರುವ ಶರದ ಪೂರ್ಣ ವಿಧು
ಮಂಡಲವೇ || ಮಧುಕರವೆರಗದ ನಳಿನವೆ । ಮಧುಕೋರಲೆ ಶೋಕ
ಕುಚಯೆ ಗತಿಯೆನಗಾರ್ ಹಾ ||

ವೃಕ್ಷಗಳಿರಾ, ನನ್ನ ಪ್ರಿಯಪತ್ನಿಯನ್ನು ನೀವೇನಾದರೂ ಬಲ್ಲಿರಾ ? ಪಕ್ಷಿಗಳಿರಾ, ನನ್ನ ಪ್ರಾಣಕಾಂತೆಯನ್ನು ನೀವೇನಾದರೂ ಬಲ್ಲಿರಾ ? ಮೃಗಗಳಿರಾ, ನನ್ನ ಮನೋಹರೆಯಾದ ಅಂಜನೆಯನ್ನು ಬಲ್ಲಿರಾ ? ವ್ಯಂತರ ದೇವತೆಗಳಿರಾ, ಎಲೈ ಗಂಧರ್ವರಿರಾ, ನೀವೇನಾದರೂ ನನ್ನ ಕೋಮಲಾಂಗಿಯಾದ ಅಂಜನೆಯನ್ನು ಬಲ್ಲಿರಾ ಎಂದು ಹಂಬಲಿಸುತ್ತಾ ಅಯ್ಯೋ ಯಾರೂ ನನ್ನ ರೋಧನವನ್ನು ಕೇಳುವವರೇ ಇಲ್ಲವೇ ? ಹಾ ಪ್ರಾಣಕಾಂತೆ ಎಲ್ಲಿರುವೆ ? ನನಗೆ ಯಾರೂ ಉತ್ತರವನ್ನು ಕೊಡುವವರೇ ಇಲ್ಲವಲ್ಲ, ಏನು ಮಾಡಲಿ ? ಇನ್ನು, ನನ್ನ ಪ್ರಾಣಕಾಂತೆಯ ವೃತ್ತಾಂತವು ನನಗೆ ತಿಳಿಯುವವರಿಗೂ ಮೌನ

ವ್ರತ ಮಾಡಿ ಇಲ್ಲಿ ಮಲಗುವೆನು ಎಂದು ಮರದ ನೆರಳಿನಲ್ಲಿ ಮಲಗಿರುವ ಸಮಯದಲ್ಲಿ ವಾಯುಕುಮಾರನನ್ನು ಹುಡುಕುತ್ತಿರುವ ಅವನ ತಂದೆತಾಯಿಗಳು ಮತ್ತು ಪ್ರತಿರವಿಖೇಚರ ಸಹ ಈ ರೋದನಧ್ವನಿಯನ್ನು ಕೇಳಿದವರಾಗಿ ಆ ಮಾರ್ಗವಾಗಿಯೇ ಬಂದು ಅಲ್ಲಿ ಮಲಗಿರುವ ಪುತ್ರನನ್ನು ಪ್ರಹ್ಲಾದ ರಾಜನು ಪುತ್ರನ ಕೈ ಹಿಡಿದು, ಸುಕುಮಾರನೆ, ಏಳು ಏಳು ಎಂದು ಎಷ್ಟು ಹೇಳಿದರೂ ವಾಯುಕುಮಾರನು ಮೌನದಿಂದ ಮಾತನಾಡದೆ ಸುಮ್ಮನೆ ಮಲಗಿರಲು, ಪ್ರಿಯೆ ನಮ್ಮ ಸುಕುಮಾರನು ಮೂರ್ಛೆ ಹೊಂದಿರುವಂತೆ ತೋರುತ್ತದೆ, ಶೈತ್ಯೋಪಚಾರ ಮಾಡು ಎನಲು ಆಗ ಕೇತುಮತಿಯು ಪುತ್ರನಿಗೆ ಶೈತ್ಯೋಪಚಾರ ಮಾಡಿದರೂ ಏಕೆ ಮಾತನಾಡುವುದೇ ಇಲ್ಲವಲ್ಲಾ, ಹಾ ಕಂದನೇ—

ರಾಗ—ಜವಾಬ್—ಆದಿತಾಳ

ಗತಿಯೇನ್ನೈ ಸುತ || ಖತಿಯೇತಕೇ || ಪ || ಸಾರಗುಣಾಢ್ಯ | ಸುರಸುತೇಜ | ವಾರಿಧಿ ಗಂಭೀರ | ಧೀರ ಮಾತಾಡೈ || ೧ || ಉರುತರನಿಶಿಯೋಳರುಹದೆ ಯಾರಿಗೂ | ಕರುಮಾಡವಗಲಿ | ಬರುವರೆ ಕಾಡಿಗೆ || ೨ || ಘೋರಮೃಗಂಗಳ್ | ಭೋರಿಡುವೆಡೆಯೊಳ್ | ಸಾರಿಮಲಗಿಹುದು | ಕ್ರೂರಕರ್ಮವಿದು ||

ಎಂದು ಕೇತುಮತಿಯು ಎಷ್ಟು ವಿಧವಾಗಿ ಪ್ರಲಾಪಿಸಿದರೂ ಅವನು ಮಾತನಾಡದೆ ಎದ್ದು ತನ್ನ ತಂದೆತಾಯಿಗಳಿಗೆ ನಮಸ್ಕರಿಸಿ ಮಾತನಾಡದೆ ಮೌನದಿಂದ ಕುಳಿತಿರಲು ಕೇತುಮತಿಯು ಪ್ರಾಣಕಾಂತನೆ, ಎಷ್ಟು ವಿಧವಾಗಿ ಹೇಳಿದರೂ ಸುಕುಮಾರನು ಮಾತನಾಡದೆ ಮೌನದಿಂದಿರುವನು ಏನು ಮಾಡಲಿ ಎನಲು, ಆಗ ಪ್ರತಿರವಿಯು, ನಿಮಗೇಕೆ ಇಷ್ಟು ಪರಿತಾಪ ? ಈತನ ಮನೋಗತವು ಗೊತ್ತಾಯಿತು, ನಾನು ಮಾತನಾಡಿಸುವೆನು ಎಂದು ಹೇಳಿ, ವಾಯುಕುಮಾರನೇ ಕೇಳು, ನಾನು ಅಂಗವೀಚಿಕೇವಲಿಗಳ ದರ್ಶನಪೂಜಾದಿಗಳನ್ನು ಮಾಡಿಕೊಂಡು ಹಿಂದಿರುಗಿ ನಭೋಮಾರ್ಗದಲ್ಲಿ ನಾನು ವಿಮಾನಾರೂಢನಾಗಿ ಬರುತ್ತಿರುವ ಸಮಯದಲ್ಲಿ ಘೋರಕಾಡಿನೊಳಗೆ ಆರ್ತಧ್ವನಿಯು ನನಗೆ ಕೇಳಿಬರಲು ಮತ್ತು ನನ್ನ ವಿಮಾನವೂ ಸಹ ನಿಲ್ಲಲು ಇದೇನೆಂದು ಯೋಚಿಸಿ ಇಳಿದುಬಂದು ನೋಡುವಲ್ಲಿ ನಿನ್ನ ಪತ್ನಿಯಾದ ಅಂಜನಾದೇವಿಯೂ ಆಕೆಯ ಸಖಿಯಾದ ವಸಂತಮಾಲೆಯೂ ನಿನ್ನ ಪುತ್ರನೂ ಆ ಪರ್ವತದ ಗುಹೆ

ಯಲ್ಲಿರುವುದನ್ನು ನಾನು ಕಂಡು ಅವರ ವೃತ್ತಾಂತವನ್ನೆಲ್ಲಾ ಅವರಿಂದ ವಿವರ ವಾಗಿ ತಿಳಿದುಕೊಂಡು ನನ್ನ ವೃತ್ತಾಂತವನ್ನೆಲ್ಲಾ ಅವರಿಗೆ ತಿಳಿಸಿ, ಅವರನ್ನು ನನ್ನ ವಿಮಾನದಲ್ಲಿ ಕೂರಿಸಿಕೊಂಡು ಬರುತ್ತಿರುವ ಸಮಯದಲ್ಲಿ ನಿನ್ನ ಮಗುವು ವಿಮಾನದಿಂದ ಕೆಳಕ್ಕೆ ಒಂದು ಪರ್ವತದ ಮೇಲೆ ಬೀಳಲು ಪರ್ವತದ ಬಂಡೆ ಗಳು ಚೂರುಚೂರಾಗಿ ಒಡೆದು ಮಗುವು ಸುರಕ್ಷಿತವಾಗಿರುವುದನ್ನು ಕಂಡು ಆ ಶಿಶುವಿಗೆ ಆಗ ಶಿಲಾಶೈಲನೆಂದು ಅಂಕಿತವನ್ನಿಟ್ಟು ಮಗುವನ್ನು ಎತ್ತಿ ಕೊಂಡು ವಿಮಾನದಲ್ಲಿ ಹೊರಟು ನಮ್ಮ ಶ್ರೀಪುರದಲ್ಲಿ ಅವರನ್ನು ಸಲಹುತ್ತಿ ರುವೆನು. ಅಲ್ಲದೆ ನಿನ್ನ ಪುತ್ರನಿಗೆ ವೈಭವದಿಂದ ಹನುಮಂತನೆಂದು ನಾಮ ಕರಣ ಮಾಡಿಸಿರುವೆನು ನಿನ್ನ ಸತಿಯೂ ಸುತನೂ ಸುಖವಾಗಿದ್ದಾರೆ ಇನ್ನು ನೀನು ಚಿಂತೆಯನ್ನು ಬಿಡು ಏಳು, ಬಾ ಶ್ರೀಪುರಕ್ಕೆ ಹೋಗೋಣವೆನಲು ಆಗ ವಾಯುಕುಮಾರನು ಸಂತೋಷಚಿತ್ತನಾಗಿ ಎದ್ದು ಪ್ರತಿರವಿಯ ಪಾದಗಳಿಗೆ ನಮಸ್ಕಾರ ಮಾಡಿ ಅರನೆ ನಿನ್ನಿಂದ ನನ್ನ ಪ್ರಾಣ ಉಳಿಯಿತು ಇನ್ನು ನಾನು ಧನ್ಯನಾದೆನು. ನಿನ್ನ ಅಪ್ಪಣೆಯನ್ನು ಶಿರಸಾವಹಿಸಿರುವೆನು ಎನಲು ಆಗ ಪ್ರತಿರವಿಯು ಪ್ರಹ್ಲಾದರಾಜ ಕೇತಮತಿಯರನ್ನು ಕುರಿತು ನೀವು ವಿಚಾರ ಮಾಡದೆ ದುಡುಕಿದುದರಿಂದ ಅನರ್ಥಗಳಿಗೆ ಕಾರಣವಾಯಿತು ಎಂದು ಹೇಳಿ ಅವರುಗಳನ್ನೂ ವಾಯುಕುಮಾರನನ್ನೂ ಕರೆದುಕೊಂಡು ತನ್ನ ಶ್ರೀಪುರಕ್ಕೆ ಬರಲು ಅವರನ್ನು ಆದರಿಸಿದನು ವಾಯುಕುಮಾರನು ಅಂತಃ ಪುರವನ್ನು ಪ್ರವೇಶ ಮಾಡಲು ಅಂಜನೆಯು ತನ್ನ ಪ್ರಾಣಕಾಂತನಿಗೆ ನಮಸ್ಕ ರಿಸಿ ಪುತ್ರನಾದ ಹನುಮಂತನು ತಂದೆಗೆ ನಮಸ್ಕರಿಸಲು ನಿಮಗೆ ಮಂಗಳವಾ ಗಲಿ ಎಂದು ಹರಸಲು ಅಂಜನೆಯು ಸಂತೋಷದಿಂದ ಪತಿಯನ್ನಾಲಿಂಗಿಸಿ—

ರಾಗ—ಕಾನಡ

ಕಂಡೆ ನೆನ್ನ ಕಾಂತನ| ಕಂಡು ಧನ್ಯಳಾದೆನೆ| ಪುಂಡರೀಕನೇತ್ರನನಾ| ಕಂಡು ಸುಕೃತ ಪಡೆದೆನೇ ||ಪಲ್ಲ|| ಹಿಂದೆ ಮಾಡಿದ ಪಾಪ| ಬಂಧವೆಲ್ಲವು ತೀರೀ| ಇಂದು ಸುಖವ ಪೊಂದಿ| ನಂದಿಸುವೆನು ನಾನು || ೧ || ಪತಿಯೆ ನಿನ್ನನಗಲಿದ| ವ್ಯಥೆಯೊಳು ಬಳಲಿದೆ| ಸತಿಯಳನುದ್ಧರಿಸಿ ನೀ| ಹಿತದಿಂದ ಪೊರೆವುದೂ || ೨ ||

ಪ್ರಾಣಕಾಂತನೆ ನಿನ್ನನ್ನಗಲಿ ನಾನು ಘೋರವಾದ ಕಾಡಿನಲ್ಲಿ ಉರುತರವಾದ ದುಃಖಕ್ಕೆ ಗುರಿಯಾಗಿ ಸಂಕಟಪಡುತ್ತಿದ್ದ ಪಾಪಶೇಷವೂ ನನಗೆ ನಿವಾರಣೆಯಾಗಿ ಈಗ ನಾನು ನಿನ್ನ ಮುಖಾರವಿಂದವನ್ನು ಕಂಡದ್ದರಿಂದ ನಾನೇ ಧನ್ಯಳು ಎನಲು ಆಗ ಪತಿಯು ಪ್ರಾಣಪ್ರಿಯೆ ಇನ್ನು ನಿನ್ನ ಚಿಂತೆಯನ್ನು ಬಿಡು ಪ್ರಥಮದಲ್ಲಿ ನಿನ್ನ ಮಾತನ್ನತಿಕ್ರಮಿಸಿ ನಾನು ಹೋಗಿ ನಿನ್ನನ್ನು ಬಹಳ ಕಷ್ಟಕ್ಕೆ ಈಡು ಮಾಡಿದ ನನ್ನ ಅಪರಾಧವನ್ನು ಕ್ಷಮಿಸು ಎಂದು ಬೇಡುವೆನು ಎನಲು ಅಂಜನೆಯು ಕಾಂತನೆ ಸ್ತ್ರೀಯಲ್ಲಿ ಇಷ್ಟು ದೀನಭಾವತೆಯನ್ನು ಹೇಳಲೇತಕ್ಕೆ ಜನ್ಮಾಂತರದ ಪಾಪಕರ್ಮವು ಒದಗಿದುದರಿಂದ ಅದನ್ನು ನಾನು ಅನುಭವಿಸಬೇಕಾಯಿತು ಇದರಲ್ಲಿ ನಿಮ್ಮ ಅಪರಾಧವೇನು. ಆದ್ದರಿಂದ ಈ ಚಿಂತೆಯನ್ನು ಬಿಡು. ಇಗೋ ನೋಡು ನಿನ್ನ ಸುಕುಮಾರನು ಎನಲು ಆಗ ವಾಯುಕುಮಾರನು ಪುತ್ರನನ್ನು ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಾಡಿ—

ಕಂದ—ರಾಗ

ಕಂದನೆ ಸುಂದರ ರೂಪನೇ || ಇಂದು ರುಚಿಸ್ಪರ್ಧಿ ಮಂದಹಾಸ ಯುತಾಸ್ಯನೆ| ಮಂದಿರನವ ಮಣಿಪುತ್ಥಳಿ| ಪೊಂದುತ ಯೆನ್ನಂಕವನ್ನು ಮನಕಾನಂದಿಸು ನೀ ||

ಮಗನಿಗೆ ಮುಖವನ್ನಿಟ್ಟು ಮುದ್ದಾಡಿ ತನ್ನ ಪತ್ನಿಯಾದ ಅಂಜನೆಯಲ್ಲಿ ಸುಖದಿಂದ ಇರುತ್ತಿರಲು ಕೆಲವು ದಿವಸಗಳು ಕಳೆದ ನಂತರ ಹನುಮಂತನಿಗೆ ವಿದ್ಯಾಭ್ಯಾಸ ಮಾಡಿಸಲು ಸರ್ವಶಾಸ್ತ್ರಗಳಲ್ಲಿ ನಿಪುಣತೆಯನ್ನೂ ಹೊಂದಿ ಅಸ್ತ್ರ ಶಸ್ತ್ರ ವಿದ್ಯೆಗಳಲ್ಲಿಯೂ ಪ್ರಖ್ಯಾತನಾಗಿರುವ ಪುತ್ರನನ್ನು ನೋಡಿ ವಾಯುಕುಮಾರನೂ ಅಂಜನೆಯೂ ಆನಂದಿಸುತ್ತಿರಲು ಪ್ರತಿರವಿಶೇಚರನು ಹನುಮಂತನ ಶಾಸ್ತ್ರ ನಿಪುಣತೆಯನ್ನು ಅಸ್ತ್ರ ಶಸ್ತ್ರ ವಿದ್ಯೆಗಳಲ್ಲಿಯೂ ಪ್ರಖ್ಯಾತಿ ಪಡೆದಿರುವುದನ್ನು ನೋಡಿ ಸಂತೋಷಭರಿತನಾಗಿ ತನಗೆ ಪುತ್ರರಿಲ್ಲದ್ದರಿಂದ ವಾಯುಕುಮಾರನನ್ನು ಕುರಿತು ವಾಯುಕುಮಾರನೇ ಈ ನಿನ್ನ ಸುತನಾದ ಹನುಮಂತನು ಸರ್ವ ಶಾಸ್ತ್ರಗಳಲ್ಲಿ ನಿಪುಣನೂ ಅಸ್ತ್ರ ಶಸ್ತ್ರ ವಿದ್ಯೆಗಳಲ್ಲಿ ಪ್ರಖ್ಯಾತನೂ ವೀರಧೀರಶೌರ್ಯೋಧಾರನೂ ಪರಾಕ್ರಮಿಯೂ ಮನ್ಮಥಸಂತ ಸ್ಫುರದ್ರೂಪಿಯೂ ಆಗಿರುತ್ತಾನೆ ಆದ್ದರಿಂದ ಇವನನ್ನು ಈ ಅನುರುಹ ದ್ವೀಪದ

ಅಧಿಪತಿಯನ್ನಾಗಿ ಮಾಡುವುದಕ್ಕೋಸ್ಕರ ಈ ಶ್ರೀಪುರದಲ್ಲಿಯೇ ಈತನಿಗೆ ರಾಜ್ಯಾಭಿಷೇಕ ಮಾಡಬೇಕೆನ್ನುವ ನನ್ನ ಮನೋರಥಕ್ಕೆ ನಿನ್ನ ಅಭಿಪ್ರಾಯ ವೇನು ಹೇಳು ಎನಲು ಆಗ ಅದಕ್ಕೆ ಆ ವಾಯುಕುಮಾರನು ತಂದೆಯೇ ಈ ವಿಷಯದಲ್ಲಿ ನನ್ನ ಆತಂಕವೂ ಸ್ವಲ್ಪವೂ ಇರುವುದಿಲ್ಲ ತಾತನೆ ಪಾಪಪರಿ ಹಾರಕನಾದ ಗುರುವೂ, ಜನಕನೂ, ಸಲಹಿದವನೂ, ಈ ಮೂವರು ಪಿತೃ ಗಳೆಂದು ಲೋಕಪ್ರಸಿದ್ಧವಾಗಿರುವುದರಿಂದ ಈ ಪುತ್ರನು ಜನ್ಮಿಸಿದಾರಭ್ಯ ಈ ವರೆವಿಗೂ ಇವನನ್ನು ಕಾಪಾಡಿದ ಭಾರ ತಮಗೆ ಸೇರಿದ್ದರಿಂದ ಇವನನ್ನು ನಿಮ್ಮ ಕುಮಾರನೆಂದೇ ಭಾವಿಸಿ ಈ ಅನುರಹದ್ವೀಪಾಧಿಪತ್ಯದ ಪಟ್ಟಾಭಿಷೇಕ ವನ್ನು ಮಾಡಿಸಿ ಈ ಶ್ರೀಪುರದಲ್ಲಿ ತಮ್ಮ ಸನ್ನಿಧಿಯಲ್ಲಿಯೇ ತಾವು ಇಟ್ಟು ಕೊಳ್ಳುವುದರಲ್ಲಿ ಸಂಕೋಚವೇನೂ ಇಲ್ಲದೆ ಪರಮಾನಂದ ಸಾಗರ ಮಧ್ಯದಲ್ಲಿ ಮುಳುಗಿರುವೆನು ಆದ್ದರಿಂದ ಪಟ್ಟಾಭಿಷೇಕ ಮಹೋತ್ಸವವನ್ನು ತಾವು ನಡೆ ಸಲು ಯಾವ ಆತಂಕವೂ ಇಲ್ಲ ಎನಲು ಆಗ ಪ್ರತಿರವಿಯು ಚಾರಕನನ್ನು ಕರೆದು ಪಟ್ಟಾಭಿಷೇಕ ಮಹೋತ್ಸವಕ್ಕೆ ಸಕಲಸಾಮಗ್ರಿಗಳೂ ಸಿದ್ಧವಾಗಲಿ ನಮ್ಮ ಪಟ್ಟಣವನ್ನೆಲ್ಲಾ ಶೃಂಗರಿಸಬೇಕೆಂದು ಮಂತ್ರಿಗೆ ತಿಳಿಸು ಎಂದು ಹೇಳಲು ಅದರಂತೆ ಮಂತ್ರಿಯು ಪಟ್ಟಣ ಶೃಂಗಾರ ಮಾಡಿಸಿ, ಅರಮನೆಯನ್ನು ಚಪ್ಪರ ತಳಿರು ತೋರಣಗಳಿಂದ ಅಲಂಕರಿಸಿದ ನಂತರ ರಾಜನು ಜೋಯಿಸರನ್ನು ಕರೆಯಿಸಿ ಪಟ್ಟಾಭಿಷೇಕ ಮಹೋತ್ಸವಕ್ಕೆ ಒಳ್ಳೆ ಲಗ್ನವನ್ನು ನಿಶ್ಚಯಿಸಿ ತನ್ನ ಇಷ್ಟ ಬಂಧುಮಿತ್ರರನ್ನೂ ವೈದಿಕರನ್ನೂ ರಾಜರುಗಳನ್ನೂ ಕರೆಯಿಸಿ—

ಸುರುಚಿರ ಲಗ್ನದೊಳ್ ಹನುಮಂತನ ಕೂಡಿಸಿ। ವರಪೀಠದೊಳಗತಿ ವೈಭ ವದಿಂ॥ ಪರಮ ವೈದಿಕರ ಜನಸಂದಣಿಯಿಂದ। ಹರಸಿ ಪಟ್ಟವನು ವಿರಚಿ ಸಿದ ॥

ಶುಭ ಲಗ್ನದಲ್ಲಿ ಆಂಜನೇಯನಿಗೆ ಮಂಗಳಸ್ನಾನ ಮಾಡಿಸಿ ಸಿಂಹಾಸನ ದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿ ಬಂದವರಿಗೆಲ್ಲಾ ಫಲ ತಾಂಬೂಲವನ್ನು ವೈದಿಕರಿಗೆಲ್ಲಾ ಭೂರಿ ದಾನದಕ್ಷಿಣೆ ಫಲ ಮುಂತಾ ದ್ದನ್ನು ವಿನಿಯೋಗ ಮಾಡಿ ಸರ್ವರಿಗೂ ಸಂತರ್ಪಣೆಗಳನ್ನು ಮಾಡಿಸಿ, ಅವ ರಶ್ನು ತೃಪ್ತಿಗೊಳಿಸಿ ಎಲ್ಲರನ್ನು ಸತ್ಕರಿಸಿ ಸಂಗೀತ ನೃತ್ಯ ಮೇಳ ಇವುಗಳಿಂದ ಹರುಷಪಡಿಸಿ ಸರ್ವರಿಗೂ ಆನಂದಪಡಿಸಿ ಕಳುಹಿಸಿದನೆಂಬಲ್ಲಿಗೆ

## ಮಂಗಳ ಮಹಾ ಶ್ರೀ ಶ್ರೀ ಶ್ರೀ

### ಮಂಗಳ-ಹಾಡು-ರಾಗಸುರಟಿ-ತಾಳ ಮಿಶ್ರಚಾಪು

ಅಂಗಜ ಮದಹರ। ಶ್ರೀ ಜಿನಮಂಗಳಂ ||ಪಲ್ಲ|| ಇಂಗಿ ಕರ್ಮಂಗಳ। ಭಂಗವ ಗೆಲಿದಿಹ। ತುಂಗ ವಿಕ್ರಮಿಯಹ। ಮಂಗಳರೂಪನಿಗೇ|| ಶುಭ ಜಯಮಂಗಳಂ ||೧|| ಸುರನರ ಪೂಜ್ಯನಿಗೆ। ವರಗುಣ ಚರಿತಗೆ। ಪರಮ ಪಾವನನಿಗೆ। ಕರುಣಸಾಗರನಿಗೆ|| ಜಯ ಶುಭಮಂಗಳಂ ||೨|| ಧರೆಯೊಳು ಶಾಲಾಪುರ। ದಿರುವ ಬಸದಿಯೋಳ್। ಸ್ಥಿರದಿ ನೆಲಸಿಹ। ಪುರು ಪರಮೇಶನಿಗೆ|| ಶುಭ ಜಯಮಂಗಳಂ ||೩|| ಅಂಗಜ ಮದಹರ। ಶ್ರೀಜಿನಮಂಗಳಂ|| ಶ್ರೀ ಶ್ರೀ ಶ್ರೀ

### ನಮಃ ಶ್ರೀ ಕೈವಲ್ಯ ಪತೀಜಯ (ಜಯಘೋಷ)

### ಕಂದ

ಗುರುಕಾಶ್ಯಪಗೋತ್ರೋದ್ಭವ। ವರವಂಶಜ ಬ್ರಹ್ಮ ದೇವಸುತ। ಆದಿರಾಜಂ|| ವಿರಚಿಸಿದನೀ ಜಿನಕಥೆಯಂ। ನೆರಿಕೋವಿದರಿದನು ತಿದ್ದಿಕೊಳ್ವುದು ದಯೆಯಿಂ ||

**ಇತಿಮಂಗಳ ಮಹಾ ಶ್ರೀ**



ಸ್ವಾ || ೧೫ || ವೀರನಾದ ವರುಣಾ | ಲಂಕಾಪತಿ ರಾವಣಾ | ವೈರಬಿದ್ದ ಬಾಣಾ | ಬಿಡುವರೋ ಇಲ್ಲದೆ ಕರುಣಾ | ಸ್ವಾ || ೧೬ || ದ್ವಾದಶ ವರ್ಷಾ | ಬರದೇ ನಿಂತನೋ ಅರಸಾ | ಅಂಜನಿಯ ಧ್ಯಾಸಾ | ಆಗಲಿಲ್ಲ ಕೆಟ್ಟಿತ್ತೋ ಮನಸಾ | ಸ್ವಾ || ೧೭ || ವಿಹಾರ ಮಾಡುತಾ | ಸರೋವರ ಶೋಭಾ ನೋಡುತಾ | ಪವನಂಜಯ ಕಾಂತಾ | ಕೂತನೋ ಅಲ್ಲಿ ಹೋಗಿ ಶಾಂತಾ | ಸ್ವಾ || ೧೮ || ರಾಜಮಂದಿರಾ | ದಂಡಿಗೆ ಇತ್ತ ಸುಂದರಾ | ಅಲ್ಲಿ ಶೋಭಾಕಾರಾ | ನಿತ್ತ ನೋಡತಿದ್ದ ಗುಣಧರಾ | ಸ್ವಾ || ೧೯ || ಗಂಡಹೆಂಣ ಜೋಡಿ | ಚಕ್ರವಾಕ ಪಕ್ಷಿ ಕೂಡಿ | ಒಳ್ಳೇ ವೃಕ್ಷ ನೋಡಿ | ಅಲ್ಲೆ ಬರುವವು ತಿರಿಗ್ಯಾಡಿ | ಸ್ವಾ || ೨೦ || ಕೆಟ್ಟಕಾಲ ಒದಗಿ | ಗಂಡ ಬರಲಿಲ್ಲ ತಿರಿಗಿ | ಹೋತ ಹೊತ್ತ ಮುಳಿಗಿ | ದುಃಖ ಆತ ಹೆಣ್ಣಪಕ್ಷಿಗಿ | ಸ್ವಾ || ೨೧ || ಮತ್ತೊಂದ ಗಿಡಕ | ಕೂತಿತು ಕಣ್ಣಕಾಣದಕ | ರಾತ್ರಿ ಆದದಕ ಹೇಣ್ತಿ ಶಿಗಲಿಲ್ಲೋ ಅದಕ | ಸ್ವಾ || ೨೨ || ಪತಿಪತಿ ಅಂತಾ | ದುಃಖಮಾಡುವದೋ ಕೂತಾ | ಎಲ್ಲಿ ಹೋದ್ಯೋ ಕಾಂತಾ | ನನ್ನ ಜೀವಕ ಮಾಡೋ ಶಾಂತಾ | ಸ್ವಾ ||೨೩|| ಪಾಪಿ ವರದೇಸಿ | ತಪ್ಪನೋಡಬೇಕ ಸೋಸಿ | ಹೋದಿರಿ ಅಗಲಸಿ | ದುಃಖದ ಭಾಂವಿಯೊಳು ನುಗಸಿ | ಸ್ವಾ ||೨೪|| ಕೇಳಿದಾಲ್ಲಿ ಕೂತಾ | ಪವನಂಜಯ ಪಕ್ಷಿಮಾತಾ | ಕರದನೋ ತ್ವರಿತಾ | ಮಂತ್ರಿಗೆ ಹೇಳಿದ ವೃತ್ತಾಂತಾ | ಸ್ವಾ || ೨೫ || ಪಕ್ಷಿಮಾತ ಬಲ್ಲಿ | ಏನ ಅದ ನುಡಿಯುವದೊ ಅಲ್ಲಿ | ಹೇಳಲೋ ಬಾಯಿಲಿ | ಅಂಡೇನ ನಿನಗ ಬುದ್ಧಿಶಾಲಿ | ಸ್ವಾ ||೨೬|| ಇಷ್ಟ ಕೇಳಿ ಮಂತ್ರಿ | ಅಂದಾನೊ ನಿವ್ಕ ಸುತ್ತ ಬಂತ್ರಿ | ಇದ ಒಂದ ರಾತ್ರಿ | ಪಕ್ಷಿಗೆ ಬಹಳ ದುಃಖ ಆತ್ರಿ | ಸ್ವಾ ||೨೭|| ಮೇದಮೇದುಬಂದಾ | ಸತಿಪತಿ ಇರುವವು ಆನಂದಾ | ಗಂಡ ಇಲ್ಲ ಇಂದಾ | ಕೆಟ್ಟಕಾಲ ಕಲಿ ಅದಕ ತಂದಾ | ಸ್ವಾ ||೨೮|| ಇರುವವ್ರೋ ಕೂಡಿ | ತಪ್ಪಿ ಇಂದ ಹರದೀತೋ ಜೋಡಿ | ದಾರಿ ನೋಡಿ ನೋಡಿ | ಹಣ್ಣ ಪಕ್ಷಿ ಆಳತತಿ ಭೋರ್ಯಾಡಿ | ಸ್ವಾ || ೨೯ || ಪವನಂಜಯ ಭೂಪಾ | ತಗದನೊ ಆಗ ಹೇಣ್ತಿ ನೆನಪಾ | ಕಟ್ಟಿಕೊಂಡಿನಿ ಪಾಪಾ | ಅಂಜನಿಗೆ ಆದಿತು ಸಂತಾಪಾ | ಸ್ವಾ ||೩೦|| ಹನ್ನೆರ್ಡ ವರುಷಾ | ಹೊರಗ ನಾ ತಿರಿಗಿನಿ ವನವಾಸಾ | ನೊಂದಿದ್ಧಿತ ಮನಸಾ | ನನ್ನ ಭೇಟಿ ಆಕಿಗೆ ಕನಸಾ || ಸ್ವಾ ||೩೧|| ಏಳಲೋ ಪ್ರಧಾನಿ | ತಡಾ ಆದರ ಆದಿತ ಹಾನಿ | ನನ್ನ ಪ್ರಾಣ ಪತ್ನಿ | ದುಃಖದೊಳು ಕೂತಾಳೊ ಅಂಜನಿ | ಸ್ವಾ ||೩೨|| ವಿಮಾನದಲ್ಲಿ ಕೂತಾ

ಅಂತರಲೆ ಬಂದಾರೋ ತ್ವರಂತಾ । ಯಾರಿಗಿಲ್ಲ ಗೊಂತಾ । ಮಾಯದಿಂದ ಒಂದು ರಾತ್ರಿ ನಿಂತಾ । ಸ್ವಾ ॥೩೩॥ ಆಡಿ ಕಾಮನಾಟಾ । ಯುದ್ಧಕೆ ಪವನಂಜಯ ಹೊರಟಾ । ಹಿಡದಾಳ ಘಟಮುಟ್ಟಾ । ಹಿಂಗ ನೀವು ಹೋಗಬಾರದ ಬಿಟ್ಟಾ । ಸ್ವಾ ॥೩೪॥ ಹಾಕುವಳೊ ಉಸರಾ । ಪಕ್ಕನ ಆದಿನೇಂದ್ರ ಬಸರಾ । ಹೇಳ ಲ್ಯಾರ ಹೆಸರಾ । ಗುರ್ತಾ ಕೊಟ್ಟ ಹೋಗೊ ನನ್ನ ಚದುರಾ । ಸ್ವಾ ॥ ೩೫ ॥ ತಿಳಿದು ಪವನಂಜಯಾ । ಮುದ್ರಿಕಾ ಕೊಟ್ಟು ಹೊರಟ ರಾಯಾ । ಹೋಯ್ತು ಆಕಿ ಭಯಾ । ಅಂತಾಳ ಜಿನೇಂದ್ರ ಜಯಜಯಾ । ಸ್ವಾ ॥೩೬॥ ಪವನಂಜಯ ತಾನಾ । ಮತ್ತೊ ಹತ್ತಿದ ವಿಮಾನಾ । ನೇರಿತು ಗಗನಾ । ಮುಟ್ಟಿತು ಹೋಗಿ ಯುದ್ಧಸೈನಾ । ಸ್ವಾ ॥೩೭॥ ಹೊಟ್ಟಿ ಬಂತ ಏರಿ।ಸಣ್ಣ ಆದು ಉಟ್ಟಂಥಾ ಸೀರಿ ಅಂಜನಿ ಸುಂದರಿ । ಆನಂದ ಆದಾಳ ಆ ನಾರಿ । ಸ್ವಾ ॥ ೩೮ ॥ ಪದ್ಮಜಾತದ ಹೆಣ್ಣಾ । ಕೂಡಿದ ಹುಬ್ಬ ಕಾಡಿಗಿಗಣ್ಣಾ । ಹೊಳದಿತ ವೈಬಣ್ಣಾ । ಜನರಿಗೆ ಸಂಶಯ ಬಂತ ಪೂರ್ಣಾ ಸ್ವಾ ॥೩೯॥ ತಿರಿಗೀತು ರೂಪಾ । ಕಂಡ ಆದೀತು ಸಂತಾಪಾ । ಅತ್ತೆಮಾವರು ಕೋಪಾ । ಮಾಡುವರು ಅಂಜನಿಯ ಪಾಪಾ।ಸ್ವಾ ॥೪೦॥ ಅಂಜನಿ ಹಿಂಬಾಲಾ । ಇರುವಳೋ ದಾಸಿ ವಸಂತಮಾಲಾ।ಬರಹೋ ಗುಪಕ್ಕೆಲ್ಲಾ । ಇರುವದು ದಾಸಿಯ ಅನುಕೂಲಾ । ಸ್ವಾ ॥೪೧॥ ಅವರಿಗೆ ಕರ ಪಾ । ಕೇಳಿದರು ಊರ ಜನಾ ನೆರದಾ । ಅನಸೀತು ಆರದಾ।ಯಾವ ಬಂದಿದ್ದ ಬಾಗಿಲ ತೆರದಾ । ಸ್ವಾ ॥ ೪೨ ॥ ಬಿಟ್ಟೇರಿ ಅಂಜಿಕಿ । ಮುಚ್ಚುದಕ್ಕ ಮಾಡೇರಿ ಹಂಚಿಕಿ । ನೊಡರಿಸಂಜಿಕಿ । ಹಾಕತೇವ ಊರಹೊರಗ ನೂಕಿ । ಸ್ವಾ ॥ ೪೩ ॥ ದೇವಿಅಂಜನಾ । ಅಂದಾಳ ಅಯ್ಯಯ್ಯೊ ಜಿನಜಿನಾ । ಕರ್ಮಇತ್ತಗ ಹನಾ । ಎಂಥಾ ಹೊತ್ತ ತಂದ್ಯೋಭಗವಾನಾ । ಸ್ವಾ ॥ ೪೪ ॥ ನಾಡೊಳು ಪತಿವ್ರತಿ । ವ್ಯರ್ಥನನಮೇಲೆ ಯಾ ಕ ತರತಿ ಆದಿತಪಕೀರ್ತಿ ಅತ್ತೆವ್ವಾ ಅಲ್ಲಧರ್ಮನೀತಿ । ಸ್ವಾ ॥ ೪೫ ॥ ತಂದಿತಾಯಿಹಡದಾ । ಕೊಟ್ಟಾರ ಮದಿವಿ ಮಾಡಿ ಹಿಡದಾ । ಬಂದೇನವ್ವನಡದಾ । ಮಾನಭಂಗಮಾಡಬೇಡ ಬಡದಾ । ಸ್ವಾ ॥ ೪೬ ॥ ಗಂಡನನ್ನು ಕರಸಿ । ಚೌಕಸಿ ಮಾಡಿ ತಲಿಬೋಳಿಸಿ । ಮ ಲಿಮೂಗಕೊರ್ಸಿ । ಕಳ್ಳರಿಊರತುಂಬಮೆರಿಸಿ । ಸ್ವಾ ॥ ೪೭ ॥ ಅಂಜನಿಯ ಪುತ್ರಿ । ಪರಮಪಾವನ ಚರಿತ್ರಿ । ತೋರಿಸಿದಳೊ ಖಾತ್ರಿ । ಪ್ರಾಣಪತಿ ಬಂದಿದ್ದ ಒಂದರಾತ್ರಿ । ಸ್ವಾ ॥ ೪೮ ॥ ಪವನಂಜಯಧೀರಾ । ಸತಿಗೆ

ಕೊಟ್ಟಿದ್ದ ಉಂಗರಾ । ಸುರಸುತಕಣ್ಣೀರಾ । ತೋರಿಸಿದರ ನಂಬಲಿಲ್ಲಯಾರಾ ಸ್ವಾ ॥ ೪೯ ॥ ವಿಶ್ವಾಸಯಿಲ್ಲಾ। ಅಂಜನಿಗೆ ತಂದಕಲಿಘಾಲಾ । ಸತ್ಯ ಅಡಗಿತ ಎಲ್ಲಾ॥ ಅತ್ತಿಮಾವರು ಸಿಟ್ಟಬಿಡಲಿಲ್ಲಾ । ಸ್ವಾ ॥ ೫೦ ರಧಾಹೊಡಿತರಸಿ । ಅಂಜನಿವಸಂತಮಾಲಿದಾಸಿ। ಇಬ್ಬರನು ಕುಂಡ್ರಿಸಿ ಬಂದಾರತವರೂರಿಗೆ ಕಳಿಸಿ ಸ್ವಾ ॥ ೫೧ ॥ ನೋಡಿ ತಂದಿತಾಯಿ। ಬಡಕೊಂಡಾರ ಬಾಯಿಬಾಯಿ। ಎಂಥಾ ಕೆಟ್ಟಘಾಯಿ । ಬಿದ್ದಿತನಿನಗ ಯಾರಸಹಾಯ ಸ್ವಾ ॥ ೫೨ ॥ ಮುಚ್ಚ್ಯೋದಲ್ಲ ಮಾತಾ । ಮಗಳ ನೀ ಮಾಡಿಕೊಂಡಿಘಾತಾ। ಬಂತಕೆಟ್ಟ ಹೊತ್ತಾ । ಸೋಸ ವರ್‍ಯಾರ ನಿನ್ನ ಹೊರತಾ।ಸ್ವಾ ॥೫೩॥ ಬಂದಹಾದಿಹಿಡದಾ। ಮಗಳ ನೀ ಹೋಗವ್ವಾ ನಡದಾ । ಏನ ಸುಖವು ಹಡದಾ । ಅಲ್ಲಿಂದ ಹಾಕಿದರೋ ಹೊಡದಾ ಸ್ವಾ ॥ ೫೪ ॥ ಊರಾಸಜನಕ । ಮೊದಲ ನಾಚಿದರೊಮನಕ। ಕಳಸ್ಯಾರೋವನಕ । ಕಲ್ಲವಡದಾರ ಕರ್ಮದ ಹೆಣಕ । ಸ್ವಾ ॥ ೫೫ ಅಡಿವಿಅರ್‍ಯಾಣಾ। ತಿರಿಗಿ ಆದಾರೊಹ್ಶೈರಾಣಾ । ಉರದಾವೋಚರಣಾ । ಯಾರಿಗೂ ಬರಲಿಲ್ಹೊಕರುಣಾ ಸಾ ॥ ೫೬ ॥ ನಡದಬೇಸತ್ತಾ । ಅಂಜನಿಗಿಡಕ ಹೋಗಿಕೂತಾ । ಹೇಳುವ ಕೊಮಾತಾ। ವಸಂತಮಾಲಿಗಿ ಅತ್ತತ್ತಾ। ಸ್ವಾ ॥೫೭॥ ಹೋಗತಾಯಿ ನೀನಾ। ಇನ್ನಮೇಲಿ ಹತ್ತಬೇಡಬೆನ್ನಾ। ನಾಮಾಡಿದ್ಧನಾನಾ। ತೀರನತೇನ ಇಲ್ಲಯಾರ ದೇನಾ ಸ್ವಾ ॥೫೮॥ ಕೇಳಿವಸಂತಮಾಲಾ । ಹೇಳತಾಳ ಇರತೇನಹಿಂಬಾಲಾ। ಬಾಳಿಕೆಟ್ಟಕಾಲಾ। ಹಡದರ ಆದಿತನಿನ್ನ ಹಾಲಾ। ಸ್ವಾ ॥೫೯॥ ಇರತೇನತಾಯಿ। ಇಲ್ಲಿನಿನಗನನ್ನ ಸಹಾಯಿ । ಮಾಡಬೇಡಘಾಯಿ । ನೋಡವರ್‍ಯಾರ ಹೊಟ್ಟಿ ಬಾಯಿ । ಸ್ವಾ ॥೬೦॥ ಅಘೋರಕಾಂತಾರಾ। ಹಡದರಮಾಡಬೇಕಯಾರಾ । ತರಬೇಕನೀರಾ। ಹಿಂದಿಂದ ಮಾಡಿಮರಮರಾ। ಸ್ವಾ॥೬೧॥ದಾಸಿಮಾತಕೇಳಿ । ದುಃಖದೊಳು ಕೂತಾಳ ಆಬಾಲಿ। ಘನಕರ್ಮದ ಬಳ್ಳಿ। ಸುತ್ತಿ ಅದೇನ ಹುಣಸಿ ಹುಳಿ। ಸ್ವಾ ॥೬೨॥ ಆತನನಗವಿಷಾ । ಹಟ್ಟಿಹೊಟ್ಟಿಯೊಳಗಕೂಸಾ। ಮಾಡಿತವ್ವಾ ನಾಸಾ । ಆದರಿಂದ ಉಂಡಿನಿವನವಾಸಾ। ಸ್ವಾ ॥೬೩॥ ತಗ್ಗುದಿನ್ನಿ ಏರಿ। ಉಸಲಇಲ್ಲಬಾಯಿಆರಿ। ಬಿದ್ದಾಳ ಅನಾರಿ। ದೇವಿಪ್ರಾಣ ಹೋಗತಿತ್ತಹಾರಿ।ಸ್ವಾ ॥೬೪॥ ಮೃದುಪಾದಗಳಾ। ನೆತ್ತರಸುರದ ಆದಾವುಪೊಳ್ಳಾ। ಎನತಂದ್ಯೋಕಾಲಾ । ಸೋತಿನಿತುಳದ ಕಲ್ಲುಮುಳ್ಳಾ । ಸ್ವಾ ॥೬೫॥ ಏರಿಏರಿಸೊರಗಿ। ಮುಟ್ಟ್ಯಾರ ಉನ್ನತಗಿರಿಗಿ। ಕಂಡರೆಲ್ಲಿಯೋಗಿ। ಕೂತಾರಹೋಗಿ ಪಾದಕೆರಗಿ ಸ್ವಾ।

||೬೬|| ಧನ್ಯ್ಯಮುನಿಶ್ರೀಷ್ಟಾ| ಅಂಜನಿಗೆ ಆಶೀರ್ವಾದಕೊಟ್ಟಾ| ಕೆಟ್ಟ ಅದೃಷ್ಟಾ| ತೀರ್ಸಬೇಕ ಪಾಪಮಾಡಿದಷ್ಟಾ| ಸ್ವಾ ||೬೭|| ಅಂಜನಿಯುಕಾಂತಿ | ಮುನೇಂದ್ರಗವಾಡ್ಯಾಳ ವಿನಂತಿ| ಸ್ವಾಮಿ ವೃತ್ತಿಶಾಂತಿ | ಆದಿಅಂತ ಹೇಳಿಬಿಡ ಸೊಚಿಂತಿ | ಸ್ವಾ || ೬೮ || ಬಂದಿಬಳಗಸ್ವಾಮಿ | ನಂಬಲಿಲ್ಲ ನನಗಮೋಕ್ಷಗಾಮಿ | ಸತ್ಯದಾಮುಹಿಮಿ | ಅಡಿಗ ಬೆನ್ನಹತ್ತಿ ೀತೊಭೂಮಿ | ಸ್ವಾ ||೬೯|| ಕೂತ ಗುರುವರ್ಯಾ | ಕತ್ತಲೆಂಬುಕರ್ಮಾಕಳಿಯೋ ಸೂರ್ಯಾ | ಜಗದ ಆಚಾರ್ಯಾ | ಕೇಳಂದ ಪವನಘೊರಿಯಭಾರ್ಯಾ | ಸ್ವಾ ||೭೦|| ಹಿಂದಿನ ಭವದಲ್ಲಿ| ಧರ್ಮಾಮುರದ ಮೆರದಿಬಾಲಿ | ವರ್ಮಹಿಡದಿ ಆಲ್ಲಿ | ಕರ್ಮಕಾಡಿ ಮಾಡಿತು ಹುಚ್ಚಪ್ಯಾಲಿ | ಸ್ವಾ ||೭೧|| ಮಿಥ್ಯಾತ್ವಹಿಡದಿ | ತಂದಿತಾಯಿ ಮಾತ ಮಿಾರಿ ನಡದಿ | ನಡಯೋಮನಿವಡದಿ | ಅದರಿಂದ ಈಗ ದುಃಖಪಡದಿ | ಸ್ವಾ ||೭೨|| ಅತ್ತಿಮಾವರ ಸೇವಾ | ಮಾಡಲಿಲ್ಲ ಇಟ್ಟಿವೈರಭಾವಾ | ಕೆಟ್ಟ ನಿನ್ನದೈವಾ | ಆದರಿಂದ ಸೋಯಸ್ಯಾರ ನಿನ್ನಜೀವಾ ||೭೩|| ಏರಿತ್ತಲ್ಲ ಗರ್ವಾ | ಹಿಡಿಯಲಿಲ್ಲ ಬಳಗದಪಾರಾ| ಆದಿತಪ್ಪಾ ಮರವಾ| ಕಾಡಿದರ ಅದರಿಂದ ಕೇಳಪ್ವಾ ಸ್ವಾ | ||೭೪|| ದೇಮಿದುರಗಿಮರಿಗಿ | ಬಿಡದೇ ಬೇಡಿಕೊಂಡಿ ಎರಿಗಿ | ಧಾಡಿತಂದಿ ಕುರಿಗಿ | ನಿಂತಕೊಯಿಸಿ ಕೋಳಿಮರಿಗಿ | ಸ್ವಾ || ೭೫ || ಜೀವಾಜೇಡುವದೇವರಾ | ಪೂಜಿದರ ನರಕಕ್ಕೆ ಹೋಗವರಾ | ಉಳಿಯಲಿಲ್ಲ ಯಾರಾ ಮುಳಗ್ಯಾರದುಃಖದ ಸಮುದ್ರಾ | ಸ್ವಾ ||೭೬|| ಹಿಂದಮಾಡಿದಪಾಪಾ | ಬಂದ ಅದಕಾಡತತಿ ಸ್ವಲ್ಪಾ | ಜಿನೇಂದ್ರನ ನೆನಪಾ | ತಗದರ ಮಾಡತಿದ್ದಿಕೋಪಾ|ಸ್ವಾ||೭೭|| ಧರ್ಮದಿಂದ ಬುದ್ಧಿ | ಧರ್ಮದಿಂದ ರಿದ್ದಿಸಿದ್ಧಿ | ಧರ್ಮದಿಂದಗೆದ್ದಿ | ಧರ್ಮದಿಂದಮೋಕ್ಷದೊಳಗ ಇದ್ದೀ|ಸ್ವಾ ||೭೮|| ದುಃಖಹಿಂದಆಯ್ತು | ಇನ್ನಮುಂದ ಸುಖವು ದೊರದೀತು | ತಿಳಿಯ ಸತ್ಯಮಾತು|ಜಿನೇಂದ್ರನ ಧ್ಯಾನಮಾಡನಿಂತು ಸ್ವಾ ||೭೯|| ಹುಟ್ಟುವನು ಪುತ್ರಾ | ಮುಂದನೋಡ್ಯಾಸ ಎಲ್ಲಾಕ್ಷೇತ್ರಾ| ಉತ್ತಮನಕ್ಷತ್ರಾ | ಹತ್ತಿಅದಾನ ಬಲವತ್ರಾ|ಸ್ವಾ ||೮೦||ತಿಳಿಯಲಿಲ್ಲಮಾಯಾ| ಅಲ್ಲೆಗುವ್ಹಾದ ಎತಿರಾಯಾ | ಹುಟ್ಟಿತಾಗ ಭಯಾ | ಘೋರವನದಲ್ಲಿ ಯಾರಸಹಾಯಾ | ಸ್ವಾ ||೮೧|| ಇದ್ದಲ್ಲಿ ಹೆಂಗಸರಾ | ಇರೋಣಿಲ್ಲ ಅಲ್ಲಿ ಮುನೇಶ್ವರರಾ | ಏರಿದರೋಶಿಖರಾ | ತಪದಲ್ಲಿ ನಿಂತಾರೊಆವರಾ | ಸ್ವಾ || ೮೨ || ಕೂತಾರು ಇಬ್ಬ್ರಾ | ಸಿಂಹಬಂದೀತು ಮಾಡಿಅಬ್ಬ್ರಾ| ಯಾರೂ ಇಲ್ಲ ಒಬ್ಬ್ರಾ |

ಯುಮರಾಯಾ ತಂದಹಾಕಿದ ಸಬ್ಬಾ | ಸ್ವಾ ||೮೩|| ಕಾಯೋ ಜಿನರಾಯಾ ದೂರಮಾಡೋ ಇಂದಬಂದಭಯಾ | ಉಂದಾರೊ ಹಾಯಹಾಯಾ | ನಾವು ಪರದೇಸಿಮಾಡೊದಯಾ | ಸ್ವಾ ||೮೪|| ಜೇಗಬಂದಏಕ್ಷಾ | ಸಿಂಹದ ಹಿಡಿಯ ಲಿಲ್ಲಪಕ್ಷಾ | ಹಾಕಿದನೋಲಕ್ಷಾ | ಅವರಿಗೆ ಕೊಟ್ಟ ಜೀವದಬೀಕ್ಷಾ |ಸ್ವಾ||೮೫|| ವಿಘ್ನಪರಿಹಾರಾ | ಮಾಡಿದನೊ ಆಗಜಿನೇಶ್ವರಾ | ನಡಗುತ ಧರಧರಾ|ಕೂತ ರೋ ನೆನಸುತದೇವರಾ | ಸ್ವಾ ||೮೬|| ಎದ್ದಾವನಡಸೂಲಿ|ಭೂಮಿಗೆ ಬಿದ್ದಾಳ ಆ ಬಾಲಿ | ಯಾರೂ ಇಲ್ಲ ಅಲ್ಲಿ| ಕಲಿಯು ಹಾಕಿದ ವನದಮಾಲಿ|ಸ್ವಾ||೮೭|| ಹಿಡದಾಳೊದಾಸಿ | ಅಂಜನಿಗೆ ಆದಿತು ಕಸವಿಸಿ | ಆದಾಳ ಬಹಳಘಾಸಿ|ಅಷ್ಟ ರೊಳು ಕೂಸಬಿತ್ತಬೇಸಿ | ಸ್ವಾ ||೮೮|| ಸೂರ್ಯ ಉದಯವಾದಾ|ಕತ್ತಲೆಂಬು ಕರ್ಮಹೋತಿ ಕಡದಾ | ನೋಡ್ಯಾಳ ಕಣ್ಣತೆರದಾ | ಅಳುವಳೂ ಪತಿಯ ನೆನ ಪತಗದಾ | ಸ್ವಾ ||೮೯|| ಎಂಥಾ ತಟ್ಟಕಾಲಾ|ನಮಗ ವದಗಿತೆಲ್ಲೊ ಬಾಲಾ | ಕೂಳು ನೀರು ಇಲ್ಲಾ | ಕುಡಿಯೋ ನೀ ಬಂದಷ್ಟ ಮೊಲಿಹಾಲಾ | ಸ್ವಾ||೯೦|| ಅಯ್ಯಯ್ಯೋ ಎನ್ನಕಂದಾ | ಬಳಗ ಇಲ್ಲ ನೋಡಲಾಕ ಬಂದಾ |ಮರಿಆದಾರ ಇಂದಾ | ಬದಕೊವನದಲ್ಲಿ ಗಾಳಿತಿಂದಾ | ಸ್ವಾ ||೯೧|| ಹಾಸಿನ್ಯೊನೆಲಕಲ್ಲಾ | ಆಳದೇಮಲಗೋ ಎನ್ನಬಾಲಾ | ಹೊಚ್ಚೇನೊ ಮುಗಿಲಾ | ಪೃಥ್ವಿ ಇದನಿನ್ನ ತೂಗೋತೊಟ್ಲಾ | ಸ್ವಾ ||೯೨|| ನೀರುತಂದು ಕಾಯಿಸಿ | ಕಂದಾ ನಿನ್ನಮಲ ಗಿಸಲಿಲ್ಲ ಹಣಿಸಿ | ಎಷ್ಟನನ್ನ ದಣಿಸಿ | ಹೊತ್ತ ಕಳದೀನ್ಯೋ ದಿನಾ ಎಣಿಸಿ ಸ್ವಾ ||೯೩|| ಪುತ್ಥಳಿಅಂಥಾ ಮಗನಾ | ನೋಡಿ ದುಃಖಮಾಡೋಳು ಅಂಜನಾ ಬಂದಿತೋ ವಿಮಾನಾ | ನಿಂತಿತೊ ಮಗನಪುಣ್ಯಗಹನಾ | ಸ್ವಾ ||೯೪|| ಅಂಜ ನಿಯದೈವಾ | ವಿಮಾನದಲ್ಲಿ ಇದ್ದ ಸೋದರಮಾಂವಾ | ಕೂಡಿತವರಜೀಂವಾ| ಕರಕೊಂಡ ನಡದ ಇಟ್ಟವೋಹಾ | ಸ್ವಾ || ೯೫ || ನಡಿಸಿದ ವಿಮಾನಾ | ಅಂತರಲೆಸೇರಿತೊಗಗನಾ | ಮಾಡಿತು ಗಮನಾ | ಅಷ್ಟರೊಳು ಮತ್ತಬಂತ ವಿಘ್ನಾ| ಸ್ವಾ ||೯೬|| ಅಂಜನಿಗೆ ಜಂಪಾ | ಹತ್ತಿತೊ ಆಗಿಯಸಂತಾಪಾ |ಎಷ್ಟ ಇತ್ತಪಾಪಾ | ಹುಟ್ಟಿ ಅಡಗೀತ ಅಕಿದೀಪಾ ಸ್ವಾ|| ೯೭ || ಕೂಸು ಬಿತ್ತು ಸಿಡದಾ | ಮುಂದಕ್ಕೆ ವಿಮಾನಹೋತನಡದಾ| ನಿಲ್ಲಲಿಲ್ಲತಡದಾ| ವ್ಯರ್ಥಆತ ಅಂಜನಿಗೆ ಹಡದಾ | ಸ್ವಾ ||೯೮|| ಎತ್ತಿ ಇಳವಲಿಲ್ಲಾ | ಬಡದೀತಲ್ಲೊ ಎದಿಗೆ ಕಲ್ಲಾ|ಅಯ್ಯಯ್ಯೊ ಎನ್ನಬಾಲಾ | ಕಣ್ಣತುಂಬನೋಡಲಿಲ್ಲಲೀಲಾ|ಸ್ವಾ||೯೯||

ದುಃಖದಲ್ಲಿ ದಿವಸಾ । ಕಳೆದನಾತಗದಿನ್ನ್ಯೇವನವಾಸಾ । ಪುರಿಯಾದ್ಯೋ ಕೂಸಾ , ಆರಿಲ್ಲೊ ಹುರಿಕೋದ ಮಾಸಾ । ಸ್ವಾ ||೧೦|| ನಿಲ್ಲಿ ವಿಮಾನ ಆಗ। ಅಷ್ಟ್ವರು ಇಳದಾರೋ ತೆಳಗ । ಕಾನ ಗುಡ್ಡದೊಳಗ । ಮುನಿರಾಯನಾಮಾಡತಿದ್ದ ಯೋಗ ಸ್ವಾ ||೧೧|| ವಾದಕೆರಗಿ ಕೂತಾ।ಕೇಳಿದರೊ ಬಾಲಕನ ಮಾತಾ । ತಿಳಿದು ವೃತ್ತಾಂತಾ । ಕೂಸ ತಂದಾರೊ ಹೋಗಿ ತ್ವರಿತಾ । ಸ್ವಾ || ೧೨ || ಬೇಡಿಕೊಂಡವನಕ । ಬಂದರೋ ಹನಲಪುರಕ । ಆನಂದಾಗಿ ಮನಕ । ನಿಂತರೋ ಆ ಪುಣ್ಯಸ್ಥಳಕ । ಸ್ವಾ || ೧೩ || ಪ್ರತಿಭಾನುರಾಜಾ । ತರಳತೋರಣ ಕಟ್ಟಿ ಧ್ವಜಾ । ಅಂಜನಿಯ ಪೂಜಾ । ಮಾಡಿ ಗಳಿಸಿದ ಪುಣ್ಯಬೀಜಾ । ಸ್ವಾ ||೧೪|| ಪ್ರತಿಭಾನುಧೀರಾ। ಆಳತಿದ್ದ ಹನಲಪೂರ ನಗರಾ। ಹನುವಂತೆಂಬೊ ಹೆಸರಾ। ಇಟ್ಟರಲ್ಲಿ ಪೂಜಿ ಜಿನೇಶ್ವರಾ। ಸ್ವಾ ||೧೫|| ಲಂಕಾದಿಂದ ಪವನಾ। ಬಂದನು ರತ್ನಪುರಕ್ಕೆ ತಾನಾ। ನೋಡಿದ ಅಂಜನಾ। ಕಾಣಲಿಲ್ಲ ಕೇಳಿದ ತಾ ಇನ್ನಾ। ಸ್ವಾ || ೧೬ || ಪವನಂಜಯ ಅಂದಾ । ಅಂಜನಿನ್ನ ಹಾಕಿರೇನ ಕೊಂದಾ। ತಾಯಿ ಬಾಯ ಬಂದಾ। ಆಗಿಬರಲಿಲ್ಲ ಮಾತ ಮುಂದಾ। ಸ್ವಾ ||೧೭|| ತಾಯಿ ಮಗನಿಗಿ । ತಿಳಿಸಿದಳೊ ನಿಂತ ಅವರ ಬಗಿ । ತವರೂರಿಗೆ ಹೋಗಿ। ನಿಂತಳೊ ಬರಲಿಲ್ಲೊ ತಿರಗಿ। ಸ್ವಾ ||೧೮|| ಮಹೇಂದ್ರಭೂಪನ್ನಾ। ಕೇಳೀದ ಹೋಗಿ ಘೊರಿಪವನಾ। ಗುಣಮಣಿ ಅಂಜನಾ। ಎಲ್ಲಿ ಕಳ್ಸಿದಿ ಹೇಳೊ ನೀನಾ। ಸ್ವಾ ||೧೯ || ಕೊಟ್ಟಾರೊ ಆಹೂತಿ । ಘೋರವನನಲ್ಲಿ ನಿನ್ನ ಸತಿ । ಕೆಟ್ಟ ತಾಕಿ ನೀತಿ। ಅಂದಾರ ಮಹೇಂದ್ರಭೂಪತಿ । ಸ್ವಾ ||೨೦|| ಹೋಗಿ ಪವನ ಆಗ। ದುಃಖದೊಳು ಕೂತನೊ ವನದಾಗ। ಹಚ್ಚಿದನೊಯೋಗ । ಕರಿಯತಾನ ಬಾರಪ್ರಿಯೆ ಬೇಗ। ಸ್ವಾ ||೨೧|| ಅಂಜನಿಯೆಕಾಂತಿ। ಇಷ್ಟ ದಿವ್ಸ ಎಲ್ಲಿ ಹೋಗಿ ಕುಂತಿ । ಬಡದೀಭ್ರಾಂತಿ । ಭೇಟಿಕೊಟ್ಟ ದೂರ ಮಾಡ ಚಿಂತಿ। ಸ್ವಾ ||೨೨|| ಬರದ್ದಾಂಗವೀರಾ । ಸೇರಿದನೊ ಹೋಗ ಕಾಂತಾರ । ಬಂದಾರೋ ಆಪ್ತರಾ । ಕರಿಯತಾರ ಮಾಡಿ ನಮಸ್ಕಾರಾ । ಸ್ವಾ ||೨೩|| ಪ್ರತಿಭಾನುರಾಯಾ । ಭಕ್ತಿಲೆ ಆಂದ ಪವನಂಜಯಾ । ಸತಿಪತಿಯ ಮಾಯಾ । ತೋರ್ಸಿ ಕೂಡ್ಸೀದ ಇಟ್ಟುದಯಾ । ಸ್ವಾ || ೨೪ || ಅಂಜಿನಿನ್ನ ನೋಡಿ । ಪವನ ಅಳತಾನೊ ಘೋರ್ಯಾಡಿ। ಕಲಿಯು ಕಿಡಿಗೇಡಿ। ಎಷ್ಟು ನಿನ್ನ ದಣಸೀದನು ಕಾಡಿ । ಸ್ವಾ ||೨೫|| ಎತ್ತಿಕೊಂಡ ಮಗನಾ । ಲಟ್ಟಲಟ್ಟ ಮುದ್ದಕೊಟ್ಟಪ

ವನಾ| ಕಮಲ ನಿನ್ನವದನಾ| ಅಂಜನಿಗೆ ವಲಡಾನ ಭಗವಾನಾ| ಸ್ವಾ||೧೬||
ಬೆಳದಚಂದ್ರಾವಮಾ| ಜಗಕೆ ಅನಿಸಿದ ಬಲಭೀಮಾ | ರೂದಲ್ಲಿಕಾಮಾ| ಮದು
ವೆಗೆ ಬಂದಾನೊಹನುಮಾ| ಸ್ವಾ ||೧೭|| ಘೊರಿಗಳು ಬಂದಾ| ಕೊಟ್ಟರೊ
ಕನ್ನೆಗಳನತಂದಾ| ಸಮಾರಂಭದಿಂದಾ| ಮದುವಿಮಾಡ್ಯಾರ ಆನಂದಾ| ಸ್ವಾ
||೧೮|| ಹನುಮಂತಶೂರಾ| ಆಳಿದನು ಸಾವಿರ ಸತಿಯರಾ| ಎಲ್ಲಾರುಚ
ಲುವೇರಾ| ರೂಪಕ್ಕೆ ಮೆಚ್ಚಿದರೊ ಅವರಾ | ಸ್ವಾ ||೧೯|| ನೇರಿಯಕಾಂತಾ
ರಾ| ಸಾಧಿಸಿದ ವಿದ್ಯಹದಿನಾರಾ| ಆಗಿಬಲಾತ್ಕಾರಾ| ಧರಣಿಮೇಲೆ ಮೆರದ
ಧರೀಧರಾ| ಸ್ವಾ ||೨೦|| ಬೇಕಾದ್ದರೂಪತೊಟ್ಟಾ| ಜಗಕೆ ತೋರಿಸಿದ ಆಭಾ
ಟಾ | ಎಷ್ಟ ಅವನಆಟಾ | ದುಷ್ಟರವುರವಟ್ಟಣಸುಟ್ಟಾ || ೨೧ || ರಾಮಲ
ಕ್ಷುಮಣಾ| ಹಿಡಕೊಂಡ ತಿರಗುವರೋಬಾಣಾ| ಕಪಟಿರಾವಣಾ | ಸೀತಾನ್ನ
ಮಾಡಿದನೊಹರಣಾ| ಸ್ವಾ ||೨೨|| ಅಗ್ರಗಣ್ಯನಾಗಿ| ಹನುಮಂತಲಂಕಾ
ದೋಳು ತಿರಿಗಿ| ಹಚ್ಚಿದನೋಬ್ಯಾಗಿ| ಸೀತಾನ್ನ ತಂದಾನೆಣೀ ಹೋಗಿ| ಸ್ವಾ
|| ೨೩ || ಸತ್ಯವಂತ್ರದಾತಾ | ದುಷ್ಟರಿಗೆ ಅನಿಸಿದ ಎಮದೂತಾ | ಆಗಣಿತ
ಗುಣವಂತಾ | ಮೋಕ್ಷಕಾಮಿನಿಗೆ ಆದಕಾಂತಾ | ಸ್ವಾ ||೨೪|| ಪವನಅಂಜ
ನಾ| ಹಡದರೊ ಹನುಮಂತ ಮಗನಾ | ನೋಸಿದುಃಖಗಹನಾ | ಕಂಲಿರೊ
ಸುಖಸ್ವರ್ಗಸದನಾ | ಸ್ವಾ ||೨೫|| ಮಹೇಂದ್ರಮನೋವೇಗಾ | ದೀಕ್ಷಾತ
ಕ್ಕೊಂಡು ಮಾಡಿಯೋಗಾ| ಸ್ವರ್ಗದಲ್ಲಿ ಜಾಗಾ| ಹಿಡದಾರ ನಂಬಿವೀತರಾಗಾ
ಸ್ವಾ || ೨೬ || ಪ್ರತಿಭಾನುರಾಯಾ | ಅಂಜನಿಗೆ ಮಾಡಿದನೊ ಸಹಾಯಾ |
ಹೋಗಲಿಲ್ಲವಾಯಾ| ಹೊಕ್ಕಾನ ಸುಖಸ್ವರ್ಗಾಲಯಾ| ಸ್ವಾ ||೨೭|| ಹಾಡ
ವು ತೀರಿತು| ಧರ್ಮದ ಪ್ರಭಾವತೋರಿತು| ನಡೆಯಿರಿ ಅರಿತು| ಜಿನೇಂದ್ರನ
ಇರಬಾರದಮರಿತು ಸ್ವಾ ||೨೮|| ದ್ವಾರಪಾಲಬೋಧಕಾ| ಮಿಧ್ಯಾಆದಬಾ
ಧಕ ಛೇದಕಾ | ಧರ್ಮವುಸಾಧಕಾ | ನಾಡಮೇಲೆ ಮೆರೆಸಿದ ಈ ಪದಕಾ
ಸ್ವಾ || ೨೯ ||

